ಯಕ್ಷ— (ಕಾಣಿಸಿಕೊಂಡು)

ಗಂಧರ್ವ, ಸಂತಸದ ಸುದ್ದಿಯೊಂದನು ನೀನು ಕೇಳಿದೆಯ?

ಗಂಧರ್ವ—(ಹಿಂತಿರುಗಿ ವಿನಯದಿಂದ) ಇಲ್ಲೇನ ಮಾಡುವಿರಿ? ನೀರವದ
ಕಟ್ಟಿರುಳೊಳಿಲ್ಲಿ? ಅಂಬರ ನಿವಾಸಿಗಳೆ!

ಕಿನ್ನರ— ಎಲೆ ಗೆಳೆಯ, ಮಂಗಳದ ವಾರ್ತೆಯನು ಜಗಕೆಲ್ಲ
ಸಾರುತಿಹೆವು.

ಗಂಧರ್ವ— ಸಂತಸದ ಸಂದೇಶವೇನು?

ಯಕ್ಷ— ಶಾಕ್ಯರರಸರ ಪುತ್ರ ಸಿದ್ಧಾರ್ಥನೀರಾತ್ರಿ
ಬುದ್ಧನಾಗುವನೆಂಬುದೇ ಶುಭದ ವಾರ್ತೆ!

ಗಂಧರ್ವ—ಹಾಗಾದರಿಂದು ಭಾರತಾಂಬೆಯೆ ಧನ್ಯೆ!

ಕಿನ್ನ — ಅಲ್ಲವೇ ಗಂಧರ್ವ!

ಯಕ್ಷ— ಯಜ್ಞಯಾಗಾದಿಗಳ
ಹಿಂಸೆಯಲಿ ಬೆಂದು, ಕೃತ್ರಿಮದ ವೈದಿಕರ
ದೌಷ್ಟ್ಯದೊಳು ನೊಂದು, ಒಣವೇದ ಪಂಡಿತರ
ವಾದದೊಳು ಮುಳುಮುಳುಗಿ ಗೋಳಿಡುವ ಭಾರತಿಯ
ಪುಣ್ಯಗಗನದ ಪೂರ್ವದೊಳು, ನೋಡು, ಹರ್ಷದರು
ಣೋದಯವು ಶೋಭಿಸುವುದೆಂತು!

ಕಿನ್ನರ— ನೋಡದೋ
ಗಂಧರ್ವ, ಭಾರತಾಂಬೆಯು ತನ್ನ ಪರಮ
ಪುಣ್ಯೋದಯಕೆ ಹಿಗ್ಗಿ ಬಿಡುಗಡೆಯ ನಿಟ್ಟುಸಿರ
ಬಿಟ್ಟು ನಲಿದಿಹಳು.

ಯಕ್ಷ— ನೋಡಲ್ಲಿ! ಮುಂದೆ ಬಹ
ಬುದ್ಧನಿಗೆ ಕಾಣಿಕೆಯ ತಂದೊಪ್ಪಿಸಲು ಧರ್ಮ
ದೇವತೆಯು ಬಿಳಿಯ ಸೀರೆಯನುಟ್ಟು, ಆರೆಯರಳಿ
ದಂತಿರುವ ಕಣ್ಣೈಳಕ ಬೀರಿ ಸಡಗರದಿಂದ
ಬರುತಿಹಳು.

ಗಂಧರ್ವ— ನೋಡಿರೆಲೆ ಬಾಂದಳದ ಬಂಧುಗಳೆ,

ಪುಣ್ಯದೇವಿಗೆ ಒದಗಿದೀ ಭಾಗ್ಯವನು ಕರುಬಿ

ಪಾಪಮಾರಿಯು ತನ್ನ ದೂತರಾವಳಿಯ-

ನಟ್ಟುತಿಹಳಲ್ಲಿ ಗೌತಮನ ಮೋಹಿಸಲು!

ಕಿನ್ನರ— ಗೌತಮಗೆ ಬಂದೊದಗಬಹುದಾದ ಕಷ್ಟಗಳ

ನೆಲ್ಲ ಪರಿಹರಿಸಲೆಂದೇ ನಾವು ಹೊರಟಿಹೆವು.

ಯಕ್ಷ— ಹಾಗಾದರಿನ್ನೇಕೆ ತಡವು! ಹೊರಡೋಣ

ಬನ್ನಿ.

ಗಂಧರ್ವ—(ಕಿನ್ನರನ ಕಡೆ ದಿಟ್ಟಿಸಿ ನೋಡಿ) ಕಿನ್ನರಾ, ನಿನ್ನ ಕರತಳದೊಳ-

ರಾಜಿಸುವುದೇನು? ಶಶಿತಾರೆಗಳಿಗೆಲ್ಲ

ಬೆಳಕ ದಯಪಾಲಿಸುತ ರಂಜಿಸುವುದೇನು?

ಯಕ್ಷ— ಅಧಿಕಾರ ಮಕುಟವದು!

ಕಿನ್ನರ— ಅರಿಯೆಯಾ ಗಂಧರ್ವ?

ಅವತಾರ ಪುರುಷರೀ ಧರೆಯಲ್ಲಿ ಜನ್ಮಿಸಲು

ಜಗದೊಡೆಯನವರಿಗೀ ಅಧಿಕಾರ ಮಕುಟವನು

ಕಳುಹುವನು!

ಯಕ್ಷ— ಜಗಕವರು ತತ್ತ್ವಬೋಧೆಯ ಮಾಡ-

ಲಾಣತಿಯನೀಯುವನು! ಅಧಿಕಾರ ಮಕುಟವಿದು

ಸಾಮಾನ್ಯವಾದುದೆಂದರಿಯದಿರು. ಬಹು ಸಂಖ್ಯೆ

ಅವತಾರಗಳ ಶಿರವ ಸಿಂಗರಿಸಿ ಬಂದಿಹ ಕಿ-

ರೀಟವಿದು. ಪಾವನಕೆ ಪಾವನವ, ಮಂಗಳಕೆ

ಮಂಗಳವನೀವ ತಲೆದೊಡವು ಇದು. ಈ ರಾತ್ರಿ

ಗೌತಮನ ಬುದ್ಧನನ್ನಾಗಿ ಮಾಡುವ ಪುಣ್ಯ

ವಹೊಳೆಯಿದು. ಬನ್ನಿ ಬುದ್ಧನಿಗೆ ನೆರವಾಗಿ

ಧನ್ಯರಾಗುವ ಬನ್ನಿ! [ತೆರಳುವರು. ತವದೆ ಬೀಳುವುದು.]

---

# ದೃಶ್ಯ ೧

[ಅರಮನೆಯ ಪಕ್ಕದ ಒಂದು ಉದ್ಯಾನವನದಲ್ಲಿ ಸಿದ್ಧಾರ್ಥನು ತಿರುಗಾಡುತ್ತಿರುವನು.]

ಸಿದ್ಧಾರ್ಥ—ಇಲ್ಲ; ಇನ್ನಿಲ್ಲಿ ಇರಲಾರೆ. ಇರಲಾರೆ!
ಎಳೆಯ ಕರೆಯನು ಕೇಳಿಯೂ ಸುಮ್ಮನಿರಲಾರೆ.
ಆತ್ಮದಾಮಂತ್ರಣವನೋದಿಯೂ ಭೋಗಾಭಿ
ಲಾಷೆಯಿಂದಿನ್ನು ನಾನಿರಲಾರೆ. ವರಧರ್ಮ
ದೇವತೆಯು ಗುಡಿಗಳಿಂ, ಹೊಲಗಳಿಂ, ವನಗಳಿಂ,
ಸೌಧಸೌಧಂಗಳಿಂ ಕೈಬೀಸಿ ಗೋಳಾಡಿ
ಕರೆವುದನು ಕಂಡೂ ಮದ್ದನಾಗಿರಲಾರೆ (ವಾದ್ಯ)
ನಾದವೇನಿದು? ವಾದ್ಯಗಳ ನಿನದ! ನನಗರಿಯ-
ದಂಥಾವ ಶುಭವಿಂದು ಬಂದಿಹುದು?—ನನಗೇನು!
ದನಿಯ ಬೀರಿರಿ ವಾದ್ಯಗಳಿರ! ನಿಮ್ಮಗಳ
ಭಾಗಕ್ಕೆ ಕಿವುಡನಾಗಿಹೆನಿಂದು. ಇಲ್ಲ; ನಾ
ನಿರಲಾರೆನಿನ್ನು! ಇಂದಿನಿರುಳನು ಬಿಟ್ಟ
ರೆನಗಿನ್ನು ಗತಿಯಿಲ್ಲ. ನಾಳೆ ನಾಳೇ ಎಂದು
ವರ್ಷಗಳ ಕಳೆದಾಯ್ತು! ನಾಳೆ ಎಂದಿಗು ನಾಳೆ!
ಇಂದಿಂದೆ! [ಚನ್ನನು ಓಡುತ್ತಾ ಬರುವನು]

ಚನ್ನ— ಶುಭಸುದ್ದಿ! ಶುಭಸುದ್ದಿ! ನನ್ನೊಡೆಯ!
(ಸಿದ್ಧಾರ್ಥನು ಗಂಭೀರನಾಗಿರುವನು)
ಏನುದಾಸೀನನಾಗಿಹೆಯಲ್ಲ, ಸಿದ್ಧಾರ್ಥ?

ಸಿದ್ಧಾರ್ಥ—ಏನು ಶುಭಸುದ್ದಿ? ಚನ್ನಬ್ಬ! ಮಂಗಳನಿ-
ನಾದಗಳು ನಭಕೇರುತಿಹವಲ್ಲ ಏಕೆ?

ಚನ್ನ— ಅದೆ ಶುಭದ ವಾರ್ತೆ,
ಸಿದ್ಧಾರ್ಥ. ನಿನಗೊಂದು ಗಂಡು ಶಿಶು ಹುಟ್ಟಿಹುದು!
ಪುಣ್ಯಕುದಿಸುವ ತೆರದಿ ಬಣ್ಣ!

ಸಿದ್ಧಾರ್ಥ— (ಅಂತರ್ಮುಖಿಯಾಗಿ) ಮತ್ತೊಂದು
ಪಾಶ. ಕಬ್ಬಿಣದ ಸರಪಣಿಯು ಬಂಧನವು!
ದಿನ ಕಳೆದ ಹಾಗೆಲ್ಲ ಬುವಿಯು ಜಾಲವು ನಮ್ಮ
ಸುತ್ತುವುದೆ ಹೊರತು, ಬಿಗಿಬಿಗಿಯುವುದೆ ಹೊರತು
ಬಿಚ್ಚಿ ಬಿಡುವುದು ಎಂಬ ನೆಚ್ಚನಾಕಾಣೆ.

ಚನ್ನ— ಏಕಿಂತು ಮೌನವಾಗಿಹೆ ಒಡೆಯ?

ಸಿದ್ಧಾರ್ಥ— (ಗಂಭೀರವಾಗಿ) ಸಾರಥಿಯೆ,
ಚನ್ನ, ಇತ್ತಬಾ. ನನಗಿಂದು ನಿನ್ನ ನೆರ-
ವಾಗಲೇ ಬೇಕು. [ಸಂಗೀತ] ಏನು ಸಂಗೀತವಿದು?

ಚನ್ನ— ಪುತ್ರೋದಯದ ಹರುಷಕಾಗಿ, ಅಂಗನೆಯ-
ರುಲಿಯುವರು ಮಂಗಳದ ಹಾಡುಗಳ. ಕೇಳು,
ಎಷ್ಟು ಮೃದು ಮಧುರವಾಗಿಹುದು!

ಸಿದ್ಧಾರ್ಥ— (ಸ್ವಗತ) ಎಲೆ ಗಾನ
ದೇವತೆಯೆ, ನಿನ್ನ ಮೋಹದ ಮುಡಿಯು ಸಿಡಿದೊಡೆವ
ದಿಂದು! ಆತ್ಮಗೀತವು ಕರ್ಣಗೀತವನು
ಏಳಿಸುತಲಿಹುದಿಂದು. ಅಮೃತ ಪಾನದ ಬಯಕೆ
ನಾಡ ಹಾಲಿನ ಬಯಕೆಯನ್ನಟ್ಟಿ ಬಿಟ್ಟಿಹುದು.
(ಗಟ್ಟಿಯಾಗಿ) ಚನ್ನ!

ಚನ್ನ— (ಅನ್ಯಮನಸ್ಕ) ಎಷ್ಟು ಹೃದಯಂಗಮವು, ಸಂಗೀತ!
ಏಕೆ ಸಿದ್ಧಾರ್ಥ, ಗಾನವೆನೆ ತನುಮನಗ
ಳೆಲ್ಲವನು ಮರೆತು ಕೇಳುತಲಿದ್ದ ನೀನಿಂದು
ಸರಗೈವ ರಮಣಿಯರನಾಲಿಸದೆ, ಚಿಂತಾತ್ಮ
ನಾಗಿರುವೆಯಲ್ಲ?

ಸಿದ್ಧಾರ್ಥ— (ನಸುನಗೆಯಿಂದ) ಹೌದು, ಚನ್ನ, ಹೌದು!
ಇರಲಿಯದು. ಇತ್ತಬಾ. ನನಗಿಂದು ನಿನ್ನ ನೆರ
ವಾಗಲೇ ಬೇಕು.

ಚನ್ನ— ಸಾರಥಿಯನೀರೀತಿ
ಕೇಳುವರೆ? ಬೆಸಸು, ಕಿಂಕರ ನಾನು.

ಸಿದ್ಧಾರ್ಥ— ಇನ್ನು ನೀ-
ನೆನ್ನ ಸಾರಥಿಯಲ್ಲ.

ಚನ್ನ— (ದೈನ್ಯದಿಂದ) ಕೆಲಸದಿಂ ಬಿಡಿಸುವೆಯ?
ಬೇಡ ಗೌತಮ ಬೇಡ. ನಾ ಮುದುಕ, ನಿರ್ಗತಿಕ!
ನಾನೆನಗಿದಪರಾಧವಾದರೂ ಏನು?
ಮನ್ನಿಸೆನ್ನೊಡೆಯ.

ಸಿದ್ಧಾರ್ಥ— (ಕರುಣೆಯಿಂದ) ಹಾಗಲ್ಲ, ಕೇಳಿಲ್ಲಿ.

ಚನ್ನ— ಇಲ್ಲ, ಬೇಡ! ಬೇಡ! ನಿನ್ನ ಬಿಟ್ಟರೆ ನಾನು
ಸಾಯುವುದೆ ಸರಿ. ಚನ್ನನೆದೆಯಲ್ಲಿ ನೀನಲ್ಲ-
ದಿನ್ನಾರು ನೆಲೆಸಿಲ್ಲ.

ಸಿದ್ಧಾರ್ಥ— (ಸ್ವಗತ) ಪಾಪ, ಮುದುಕನಿವ!
(ಗಟ್ಟಿಯಾಗಿ) ಚನ್ನಜ್ಜ ಕೇಳಿಲ್ಲಿ, ನಿನ್ನನಾ ಬಿಡಲಾರೆ,
ಹೆದರದಿರು.

ಚನ್ನ— (ಸಂತಸದಿಂದ) ನೀನೀಗ ಸಿದ್ಧಾರ್ಥ! ಮತ್ತೇನು?

ಸಿದ್ಧಾರ್ಥ—ಇಂದು ನಾ ಬಹು ದೂರ ಹೋಗಬೇಕೆಂದಿರುವೆ.

ಚನ್ನ— (ಆಶ್ಚರ್ಯದಿಂದ) ಯಾವೆಡೆಗೆ ಸಿದ್ಧಾರ್ಥ? ಇಂದೇಕೆ?
ಮಾತೇನು?
ಮಗನು ಹುಟ್ಟಿದ ದಿನವೆ ತಂದೆ ಹೋದರೆ ದೂರ
ಲೋಕವೇನೆನ್ನುವುದು?

ಬೇಕಾದವನು, ಕೇಳು. ಇಂದಿನಿರುಳೇ ನಾನು
ತಿರೆಸಿರಿಗಳೆಲ್ಲವನು ಬಿಸುಟು ಮುಕ್ತಿಶ್ರೀ
ಯನ್ನರಸಿ ಹೊರಡುವೆನು.

ಚನ್ನ— ಏಕೆ, ನನ್ನೊಡೆಯ,
ಇಲ್ಲಿ ಸೊಗವಿಲ್ಲವೇ ನಿನಗೆ?

ಸಿದ್ಧಾರ್ಥ— (ವ್ಯಾಕುಲತೆಯಿಂದ) ಚನ್ನಜ್ಜ,
ನಾನೊಬ್ಬ ಸುಖಿಯಾದರೇನಾಯ್ತು? ಲೋಕವೇ
ಬೊಬ್ಬಿರಿಯುತಿಹುದಲ್ಲ ಬೆಂದು ಬಡತನದಲ್ಲಿ.
ಮೌಢ್ಯಾಂಧಕಾರದೊಳು ಸಿಕ್ಕಿ, ದಾರಿಯ ತಪ್ಪಿ,
ಕಾಡುಪಾಲಾಗಿಹಳು ಭಾರತಾಂಬೆಯು, ಚನ್ನ,
ಕಾಡುಪಾಲಾಗಿಹಳು! (ನಿಟ್ಟುಸಿರು ಬಿಟ್ಟು)
ಚನ್ನಜ್ಜ, ನಿನಗೆಲ್ಲ
ಬಣ್ಣಿಸಲು ಸಮಯವಿಲ್ಲೀಗ. ನನಗಿಂದು
ನೆರವಾಗುವೆಯ ಹೇಳು.

ಚನ್ನ— ಎದೆಯೇಕೊ ನಡುಗುತಿದೆ.
ಒಡೆಯ, ನೀನೇನು ಮಾಡುವೆಯೊ ನಾನರಿಯೆ.
ನಿನ್ನ ಚಿತ್ತವನರಿಯೆ. ಆದೊಡೆಯು ನಿನ್ನಲ್ಲಿ
ನೆಚ್ಚುಂಟು ಎನಗೆ. ಇಂದು ಹೋದವನೆಂದು
ಹಿಂದಕ್ಕೈತರುವೆ?

ಸಿದ್ಧಾರ್ಥ— ಎಂದಿಗೋ ನಾನರಿಯೆ,
ಸಾರಥಿ.

ಚನ್ನ— ಒಂದು ವಾರವೆ? ಎರಡೆ? ಮೇಣ್ ಮೂರೆ?

ಸಿದ್ಧಾರ್ಥ—ಅದಕಿಂತ ಹೆಚ್ಚು, ಚನ್ನಜ್ಜ, ಅದಕಿಂತ
ಹೆಚ್ಚು.

ಚನ್ನ— ಹಾಗಾದರೇನೊಂದು ತಿಂಗಳೇ?

ಸಿದ್ಧಾರ್ಥ—(ಮುಗುಳುನಗೆಯಿಂದ) ಅಲ್ಲ, ಚನ್ನ, ಅಲ್ಲ.

ಚನ್ನ— ಒಂದು ಸಂವತ್ಸರವೇ?

ಸಿದ್ಧಾರ್ಥ—ಏನೋ, ನಾನರಿಯೆ.

ಚನ್ನ— ಸಿದ್ಧಾರ್ಥ,
ಏನು ನೀನನ್ನುವುದು! ನಿನ್ನ ಪಯಣದ ಸುದ್ದಿ
ರಾಜರಿಗೆ ಗೊತ್ತೆ?

ಸಿದ್ಧಾರ್ಥ— ಗೊತ್ತಿಲ್ಲ.

ಚನ್ನ— ಹೇಳದೇ
ಕೇಳದೇ ಓಡುವೆಯ? ಹೋಗಿ ತಿಳಿಸಲೆ ನಾನು?

ಸಿದ್ಧಾರ್ಥ—(ಆಜ್ಞಾವಾಣಿಯಿಂದ) ನಿಲ್ಲು, ಚನ್ನ, ನಿಲ್ಲು! ಗುಟ್ಟಾದ
ಪಯಣವಿದು.
ಗುಟ್ಟಾದ ಪಯಣ! (ಸ್ವಗತ) ಬಡಪಾಯಿ ಚನ್ನಜ್ಜ,
ಮುಗ್ಧ ಚನ್ನಜ್ಜ, ನನ್ನ ಮನವನ್ನರಿಯೆ. (ಗಟ್ಟಿಯಾಗಿ)
ಕೇಳಿಲ್ಲಿ. ಚನ್ನಜ್ಜ ಕೇಳಿಲ್ಲಿ, ನಿನಗೆಲ್ಲ
ವಿಶದವಾಗುಸುರುವೆನು. ಆ ದಿನದ ನೆನಪಿದೆಯೆ?

ಚನ್ನ— ಯಾವ ದಿನ?

ಸಿದ್ಧಾರ್ಥ—(ಭಾವದಿಂದ) ಮುದುಕನೊಬ್ಬನ ಕಂಡ ಪುಣ್ಯದಿನ!
ರೋಗಿಯನು ಕಂಡ ದಿನ! ಸತ್ತವನ ಕಂಡ ದಿನ!
ಯೋಗೀಶನೊಬ್ಬನನು ಕಂಡತುಳ ಪುಣ್ಯದಿನ!
ಆ ದಿನದ ನೆನಪಿದೆಯೆ ನಿನಗೆ?

ಚನ್ನ— ಹೌದೊಡೆಯ.

ಸಿದ್ಧಾರ್ಥ—ಅಂದಿನಿಂದಲು ನಾನು ಬುದ್ಧನೆಂದಾಗುವೆನೊ
ಜಗವನೆಂದುಳುಹುವೆನೊ ಎಂದು ಹಂಬಲಿಸು
ತಿರುವೆ.

ಚನ್ನ— (ಸ್ವಗತ) ಜಾತಕದ ಜೋಯಿಸನು ಅಂತೆಯೇ
ಸುಡಿದಿದ್ದ.

ಸಿದ್ಧಾರ್ಥ— ರಾಜ್ಯವನ್ನಗಲುವಾ ದಿಸವೇ
ಮದುವೆ ಬಂದೆನ್ನ ನಿಲ್ಲಿಸಿತು.

ಚನ್ನ— ಇಂದು ಸುತನುದಯ
ನಿಲ್ಲಿಸದೆ?

ಸಿದ್ಧಾರ್ಥ— ಇಲ್ಲ, ಎಂದೂ ಇಲ್ಲ. ಚನ್ನ,
ಇಂದು ಜವ ಬಂದರೂ ತಡೆಯಲಾರನು ಎನ್ನ.
ಕೇಳದಿರು ಪ್ರಶ್ನೆಯನು ಇಷ್ಟುದಿನ ನಿನ್ನನಾ
ಸಲಹಿದೆನು. ನೀನು ಇಂದಿನೊಂದಿರುಳಲ್ಲಿ
ಸಲಹಲಾರೆಯ ಎನ್ನ?

ಚನ್ನ— ನಿನ್ನ ಪ್ರೇಮಕೆ ಸೋತೆ
ಸಿದ್ಧಾರ್ಥ; ಹೇಳು. ಮಾರ್ನುಡಿಯ ನುಡಿಯದೆಯೆ
ಮಾಡುವೆನು.

ಸಿದ್ಧಾರ್ಥ— ಯಾರಿಗಿದನರುಹದಿರು.

ಚನ್ನ— ಇಲ್ಲ.
ನನ್ನೆದೆಗು ನಾ ಹೇಳೆ.

ಸಿದ್ಧಾರ್ಥ— ಇಂದು ನೀನೆನ್ನ
ಕೋಣೆಯೆಡೆ ಮಲಗಿಕೊ. ರಾತ್ರಿ ನಿನ್ನನು ಕರೆವ
ಸಮಯ ಬರಬಹುದು.

ಚನ್ನ— ತಪ್ಪದೇ ಮಲಗುವೆನು.

ಸಿದ್ಧಾರ್ಥ—ವಾದ್ಯಗಳು ನಿಂತಿಹವು. ಸಸಗಾಗಿ ಕಾಯುವರೊ
ಏನೊ; ಹೋಗುವೆನು. ಮರೆಯದಿರು, ತೊರೆಯದಿರು!
(ತೆರಳುವನು)

ಚನ್ನ— ಸಿದ್ಧಾರ್ಥ, ಗೌತಮಾ! ನಿನ್ನ ಮನವರಿಯೆ!
ಮಿಂಚುಹುಳು ಬಲ್ಲುದೇ ಚಂದ್ರತಾರೆಗಳೇಕೆ
ಬೆಳಗುತಿವೆ ಎಂದು. ಆದರೂ ಮಿಣುಕುವುದು
ಚುಕ್ಕಿಗಳನನುಕರಿಸಿ. ಅಂತೆಯೇ ನಾನೂ.
ಅವನು ತೊಳಗುವನೆಂಬುದನು ಬಲ್ಲೆ. ಏತಕೆಂ-
ಬುದನರಿಯೆ. ಆದರಾತನು ಬರಿದೆ ತೊಳಗುವವ-
ನಲ್ಲ. ಏನನೋ ಬೆಳಗಲೆಂದೇ ಅವನು
ತೊಳಗುವನು. ಸಿದ್ಧಾರ್ಥ ತೊಳಗಿದರೆ ಬೆಳಗುವನು.

[ಹೋಗುವನು. ಪರದೆ ಬೀಳುವುದು.]

---

# ದೃಶ್ಯ ೨

[ಅರಮನೆಯಲ್ಲಿ ಒಂದು ಕೋಣೆ. ಸಿದ್ಧಾರ್ಥನು ಹಾಸಗೆಯ ಮೇಲೆ ಕುಳಿತಿಹನು. ದೀಪವೊಂದುರಿಯುತಿದೆ.]

ಸಿದ್ಧಾರ್ಥ—ಹಿಂಜರಿಯದಿರು ಮನವೆ. ಕಲ್ಲಾಗು ಎದೆಯೆ.
ಬೆಣ್ಣೆಯಾಗುವೆ ಮುಂದೆ! ವ್ಯಾಮೋಹವೇ ಸಾಯಿ!
ವೈರಾಗ್ಯವೇ ಕಾಯಿ! ಮುಕ್ತಿದೇವತೆ, ತಾಯಿ,
ಬಾದೆನ್ನ ಹೃದಯಕಮಲದಿ ನೃತ್ಯಮಾಡು.
ಮಾಯೆಯನು ದೂಡು. ಶಕ್ತಿಯನು ನೀಡು!
(ಎದ್ದು ಕಿಟಕಿಯ ಬಳಿಗೆ ಹೋಗಿ ಹೊರಗೆ ನೋಡಿ.)
ಮಲಗಿ ಕೈವಾರಿಗಳೆ ಮಲಗಿ. ಮಲಗಿರಿ
ವಾದ್ಯಗಾರರೆ; ನಿದ್ದೆ ದೇವತೆಯೆ ನಿನ್ನ
ಮಧುರ ಚುಂಬನವಿಂದು ಮಧುರತರವಾಗಲಿ!
ನಿನ್ನ ಮುತ್ತಿನೊಳಿಂದು ಎಲ್ಲ ಕಣ್ಣೆವೆಗಳನು
ಒತ್ತಿಹಿಡಿ. ಮೌನದೇವತೆಯೆ ಬಾ, ನಿನ್ನ

ಕೈಲಾಸ— ಇಲ್ಲ; ನನ್ನೊಡೆಯ.

ಸಿದ್ಧಾರ್ಥ— ಹೋಗು

ಮಲಗಿಕೋ. ಭಯವೇನೂ ಇಲ್ಲ.

ಕೈಲಾಸ— ಕರ್ತವ್ಯ?

ಸಿದ್ಧಾರ್ಥ— ಬಹಳ ಒಳಲಿಹೆ ನೀನು. ನನ್ನಾಜ್ಞೆ!

ಹೋಗು ಮಲಗಿಕೊ. [ಹೋಗುವವನನ್ನು ಕುರಿತು]

ಇರು ಸ್ವಲ್ಪ, ಕೈಲಾಸ.

ಕೈಲಾಸ—(ಹಿಂತಿರುಗಿ) ಅಪ್ಪಣೆ.

ಸಿದ್ಧಾರ್ಥ— ನಿನಗೆಷ್ಟು ವಯಸೀಗ?

ಕೈಲಾಸ— ತಮ್ಮ

ತಂದೆ ಪಟ್ಟಕ್ಕೆ ಬಂದಾಗ ನನಗೆಂಟು

ತುಂಬಿತ್ತು.

ಸಿದ್ಧಾರ್ಥ—(ಮುಗುಳುನಗೆಯಿಂದ) ನೀನು ಬಹು ಬಡವನಲ್ಲವೆ ಹಾಗಾದರೆ?

ಕೈಲಾಸ—ತಮ್ಮ . . . . ಕೃಪೆಯಿಂದ . . . .

ಸಿದ್ಧಾರ್ಥ— ಇರಲಿ ಬಿಡು. ಬಾ ಇಲ್ಲಿ.

ತೊಡವುಗಳು ಬೇಕೇನು ನಿನಗೆ? ದುಡದುರನೆ

ಕೈಲಾಸ—(ತೆಗೆದುಕೊಂಡು) ನನ್ನೊಡೆಯ!
ಸಿದ್ಧಾರ್ಥ—ನಿನ್ನೊಡವೆ! (ಮರಳಿ ಮತ್ತೊಂದು ಕೊಡುವನು)
ಕೈಲಾಸ—(ತೆಗೆದುಕೊಂಡು) ನನ್ನೊಡೆಯ!
ಸಿದ್ಧಾರ್ಥ— ನಿನ್ನೊಡವೆ! ತೆಗೆದುಕೊ,
ಮಲಗಿಕೊ, ಹೋಗು, ನನ್ನಿಷ್ಟ.
ಕೈಲಾಸ— ನನ್ನೊಡೆಯ!
(ಅಡ್ಡಬಿದ್ದು ಹೋಗುತ್ತಾ, ಆತ್ಮಗತ)
ಮುಂದೆ ಏನಾಗುವುದೋ ದೇವರೇ ಬಲ್ಲ.
ಸಿದ್ಧಾರ್ಥ—(ಬಾಗಿಲು ಹಾಕಿ) ಹೊತ್ತಾಯ್ತು, ಕಾಲಚಕ್ರವೆ ತಿರುಗು ಮೆಲ್ಲನಿಂ-
ದೊಂದು ದಿನ. ಚನ್ನನೆಚ್ಚತ್ತಿಹನೊ? ಇಲ್ಲವೊ?
[ಮತ್ತೊಂದು ಬಾಗಿಲು ತೆರೆದು] ಎಂತು ಮಲಗಿಹನು!
ನಿದ್ದೆಯವನನು ಶಾಂತಿ
ಸಾಗರದೊಳದ್ದಿಹಳು. ಎಲೆ ನಿದ್ದೆ, ಎನಿತು ಮೃದು
ಮಧುರಳೌ ನೀನು. ಸಮತೆಯಿಹಾಯುವೆ ಸರ್ವ
ಜೀವಗಳಿಗೆಲ್ಲ. ನಿನ್ನ ಗಾಢಾಲಿಂಗ-
ನದೊಳೆಲ್ಲರೂ ಒಂದೆ. ನಿಷ್ಪಕ್ಷಪಾತಳೌ
ನೀನು. ಬಡಕೂಲಿಯಾದೊಡೆಯು, ಮೇಣರಸ-
ನಾದೊಡೆಯು ಭೇದ ತೋರದೆ ನೀನು ಮುತ್ತಿಡುವೆ.
ಯೋಗಿಯಾದರು ಅಥವ ತಲೆಬಡಿಗನಾದರೂ
ನಿನ್ನ ದಿಟ್ಟಿಯೊಳೆಲ್ಲರೊಂದೆ. ಜಗದೆನಿತು
ಬಳಲಿಕೆಯ, ಕೋಟಲೆಯ ನುಂಗುತಿಹೆ ನೀನು!
ಚನ್ನ— (ಕನವರಿಸಿ) ಬಂದೆ, ನನ್ನೊಡೆಯ. ಬೇಡ, ಬೇಡಾ! ಬೇಡ!
ಸಿದ್ಧಾರ್ಥ—ಕನವರಿಸುತಿಹನು. (ಮೆಲ್ಲಗೆ) ಚನ್ನಜ್ಜ ಚನ್ನಜ್ಜ!!
ಎಲೆ ನಿದ್ದೆ, ನಿನ್ನ ಕಡಲೆನಿತಾಳವಿಹುದು?
(ಮೈಮುಟ್ಟಿ) ಚನ್ನಜ್ಜ! ಚನ್ನಜ್ಜಾ!

ಚನ್ನ— (ಗಾಬರಿಯಿಂದ) ಅಯ್ಯಯ್ಯೋ! ಅಯ್ಯಯ್ಯೋ!
ಏನು ಸನ್ನೊಡೆಯ (ಎದ್ದು ಕಣ್ಣುಜ್ಜಿಕೊಂಡು ಸುತ್ತಲೂ ನೋಡಿ
ಸಿದ್ಧಾರ್ಥನನ್ನು ನೋಡುವನು.)

ಸಿದ್ಧಾರ್ಥ— ಬೆದರದಿರು; ನಾನು,
ಸಿದ್ಧಾರ್ಥ.

ಚನ್ನ— ಏನು ಸನ್ನೊಡೆಯ?

ಸಿದ್ಧಾರ್ಥ— ಒಳಗೆ ಬಾ
ಕನಸು ಕಂಡೆಯ ಏನು?

ಚನ್ನ— (ಒಳಗೆ ಬಂದು) ಏನು ಕನಸಪ್ಪಾ!
ದುಃಸ್ವಪ್ನ ಸನ್ನೊಡೆಯ!

ಸಿದ್ಧಾರ್ಥ— ಏನು ಕನಸದು ಚನ್ನ?

ಚನ್ನ— ನಾಲಗೆಯೆ ಬಾರದೆನಗಷ್ಟು ದುಃಸ್ವಪ್ನ!

ಸಿದ್ಧಾರ್ಥ—ಹೇಳಬಾರದೆ ಎನಗೆ.

ಚನ್ನ— ಹೇಳಬಾರದ ಸ್ವಪ್ನ!
ಕೇಳಬಾರದ ಸ್ವಪ್ನ!

ಸಿದ್ಧಾರ್ಥ— ಇರಲಿ ಬಿಡು. ಹೋಗಿ
ಕಡಿವಾಣ ಹಾಕದೇ ಕಂಟಕನ ಕರೆದು ತಾ.
ಜತೆಗೆ ಇನ್ನೊಂದು ಹಯವನ್ನು ತಾ.

ಚನ್ನ— ಏತಕ್ಕೆ?

ಸಿದ್ಧಾರ್ಥ—ಆಗಲೇ ಮರೆತೆಯಾ. ಬೈಗಿನಲ್ಲಂದದ್ದು?

ಚನ್ನ— ಏನದು?

ಸಿದ್ಧಾರ್ಥ—(ಸ್ವಗತ) ಸ್ಮೃತಿ ಕೂಡ ನರೆನವಿರ ಕಂಡೊಡನೆ
ದೂರಾಗುವುದು ಹೇಸಿ. (ಅವನ ತಲೆ ಹಿಡಿದು ಮೆಲ್ಲನೆ ಅಲುಗಿಸಿ)
ಉದುರುದುರು ನೆನಪೆ!
ಈಗ ನೆನಪಾಯ್ತೆ? (ಮುಗುಳ್ನಗೆ)

ಚನ್ನ— ಆಯ್ತಾಯ್ತು.

ಸಿದ್ಧಾರ್ಥ— ನಡೆ ಬೇಗ.

ಅರಮನೆಯ ಪಶ್ಚಿಮದ್ವಾರದೊಳು ಕಾಯುತಿರು.
ಬರುವೆನಲ್ಲಿಗೆ ಬೇಗ.

ಚನ್ನ— (ಕೈ ಮುಗಿದು) ಅಪ್ಪಣೆ ಸನ್ನೊಡೆಯ.

(ಹೋಗುವನು)

ಸಿದ್ಧಾರ್ಥ—(ದೀಪದ ಬಳಿ ಸಂದು)

ಬಾ ಬೆಳಕೆ ಬಾ ಬೇಗ. ನೀನು ಹೊರಗಿನ ಬೆಳಕು
ಜ್ಞಾನ ಒಳಗಿನ ಬೆಳಕು. ನೀನಡಿಗಳಿಗೆ ದಾರಿ
ತೋರಿಸುವೆ. ಅರಿವಾದರಾತ್ಮನನು ಕೈ ಹಿಡಿದು
ನಡೆಸುವುದು. ಎಲೆಲೆ ಹೊರಗಿನ ಬೆಳಕೆ, ಒಳಗಿನಾ
ಬೆಳಕ ಪಡೆಯಲು ಹೋಗುತಿಹೆನು. ನೆರವಾಗು.
ಬಾ ಬೆಳಕೆ, ಬಾ ಬೇಗ. (ದೀಪವಿಡಿದು ಬಾಗಿಲ ಬಳಿ ಸಂದು)

ಕಡೆಯ ವಂದನೆ ನಿನಗೆ

ಕೋಣೆಯೇ, ಕಡೆಯ ವಂದನೆ ನಿನಗೆ. ಸವಿಯಾದ
ನೆನವುಗಳಿಗಾವಾಸವಾಗಿರುವೆ. ಕಡೆಯ ವಂ-
ದನೆ ನಿನಗೆ ಕೋಣೆಯೇ, ಕಡೆಯ ವಂದನೆ ನಿನಗೆ.

(ಹೋಗಿ ಮತ್ತೆ ಬಂದು)

ಪತ್ರವನು ಬರೆದಿಟ್ಟು ಹೋಗುವೆನು. ನನ್ನಿಂದ
ಅವರಿಗೇಕುಬ್ಬೆಗವು? (ಪತ್ರ ಬರೆದಿಟ್ಟು, ದೀಪ ತೆಗೆದುಕೊಂಡು)
ನಡೆಸೆನ್ನ ಬೆಳಕೇ, ನಡೆಸು. ಬೆಳಬೆಳಗಿ ಮುಂ-
ದಡಿಯಿಡಿಸು. ನಂಬಿಹೆನು ಋಜುಮಾರ್ಗವನೆ ಹಿಡಿಸು!

[ತೆರಳುವನು. ಪರದೆ ಬೀಳುವುದು.]

---

## ದೃಶ್ಯ ೩

[ಕುದುರೆ ಲಾಯದ ಬಳಿ. ಚನ್ನನು ಬರುವನು.]

ಚನ್ನ— ನಾನರಿಯೆ, ನಾನರಿಯೆ, ಇಂದು ಕಡೆಗೇನಾಗು
ವುದೊ ಎಂದು. ಅವನಿಂದು ಬರಿಯ ಹುಚ್ಚನಂ-
ತಿಹನು. ಅವನಾಣತಿಯನೆಸಗಬೇಕೋ
ಬೇಡವೆಂಬುದನರಿಯೆ, ಒಡೆಯನೀಪರಿ ಹುಚ್ಚ
ನಾದೊಡೆ ವಿಧೇಯನಾಗಿರಬೇಕೆ? ಅವಿಧೇಯ-
ತನವವನ ಭಾಗಕ್ಕೆ ಶುಭವಾಗಬಹುದು;
ಶುಭವಾಗಬಹುದು! ಇರಲಿ ರಾಲನ ಕರೆವೆ!
(ಬಾಗಿಲ ಬಳಿ ಹೋಗಿ) ರಾಲ! ಏ ರಾಲ! ಏ ರಾಲ!
ಏ ರಾಲಾ!
ಕಾಸ್ತ್ರಾರರಿವರೂ ಕುದುರೆಗಳೆ! [ಬಾಗಿಲ ತಟ್ಟಿ]
ಏ ರಾಲಾ!
ಏನು ಚಳಿಯಪ್ಪಾ! ಮೈಯೆಲ್ಲ ಕೊರೆಯುತಿದೆ.

ರಾಲ— (ಬಂದು) ಯಾರದು? ಈ ರಾತ್ರಿ ಕರೆವವರು?

ಚನ್ನ— ನಾನು!
ಏನು ನಿದ್ದೆಯೊ ನಿನಗೆ! ಊರೆಲ್ಲ ಬೆಂದರೂ
ನೀವುಟ್ಟಿಗೇಳೆ!

ರಾಲ— ನಾವೇನು ಮೀನುಗಳೇ,
ಕಣ್ಮುಚ್ಚದಾವಾಗಲೂ ನಿಮ್ಮ ಕಾಯುತ್ತ
ಕುಳಿತಿರುವುದಕ್ಕೆ?

ಚನ್ನ— ಮಾತಿರಲಿ, ಬಾ ಇಲ್ಲಿ.
ನಿನ್ನಿಂದ ಈಗೊಂದು ಬಹು ದೊಡ್ಡ ಕಾರ್ಯ ಸಾ
ಧನೆಯಾಗಬೇಕು.

ರಾಲ— (ದೊಡ್ಡದಾಗಿ ಕಣ್ಣು ತೆರೆದು) ಏನಪ್ಪಾ!

ಚನ್ನ— ಮಾಡುವಿಯೋ
ಹೇಳು!

ರಾಲ— ಕುದುರೆಗಳು, ಲಾಯಗಳು, ಜೀನುಗಳು,
ಕಡಿವಾಣಗಳನಿನಿತನೊತ್ತಟ್ಟಿಗಿಟ್ಟು
ಉಳಿದಾವ ಕೆಲಸವನ್ನಾದರೂ ಹೇಳು.

ಚನ್ನ— ದೊಡ್ಡ ಗುಟ್ಟಿದು ನೋಡು. ರಟ್ಟುಮಾಡಿದರೆ
ತಲೆ ಹೋಗುವಂತಹುದು.

ರಾಲ— (ದಿಗಿಲು ಬಿದ್ದು) ಹಾಗಾದರದು ಬೇಡ!

ಚನ್ನ— ಒಪ್ಪಿ ಬೇಡ ಎನ್ನುವಿಯಾ ಈಗ! ಬಾ ಇಲ್ಲಿ! (ಕೈ ಬೀಸುವನು)
ಸಿದ್ಧಾರ್ಥನಿಂದು ಬಹುದೂರ ಹೊರಟಿಹನು.

ರಾಲ— ಎಲ್ಲಿಗೆ? ಏತಕ್ಕೆ? ಈ ರಾತ್ರಿ! ಅಬ್ಬಬ್ಬ!

ಚನ್ನ— ಸುಮ್ಮನಿರು, ತೆಪ್ಪಗಿರು! ಎಲ್ಲಿಗೆಂಬುದನರಿಯೆ
ಇಂದಾತನೇಕೋ ವಿಚಿತ್ರನಾಗಿಹನು.

ರಾಲ— ಅದಕ್ಕೆ ನಾನೇನು ಮಾಡುವುದು?

ಚನ್ನ— ಅರಮನೆಯ
ಪಶ್ಚಿಮ ದ್ವಾರಾಭಿಮುಖವಾದ ಬೀದಿಯೊಳು
ನೀನಡಗಿ, ಸಿದ್ಧಾರ್ಥನಲ್ಲಿಗೈತಂದೊಡನೆ
ಅಬ್ಬರಿಸು!

ರಾಲ— ಬಲು ಒಳ್ಳೆಯುಪದೇಶ, ಚನ್ನಯ್ಯ!
ನನ್ನ ಬೆನ್ನಿನ ತೊಗಲಿಗೆಲ್ಲಿ ಹೋಗಲಿ ನಾನು
ಆಮೇಲೆ.

ಚನ್ನ— ಹೆದರದಿರು; ನೀನು ಬೊಬ್ಬೆಯಿಡು.
ಬಹುಮಾನ ದೊರಕುವುದು ನಿನಗೆ.

ರಾಲ— (ಬೆರಗಾಗಿ) ನೋಡಲ್ಲಿ!

ಚನ್ನ— ಅವನೆ ಬರುತಿಹನು. ಅರುಗಾಗು ರಾಲ!

[ಚನ್ನ ರಾಲರು ಅಡಗುವರು. ಸಿದ್ಧಾರ್ಥನು ಬರುವನು. ಕೈಲಿ ದೀಪ.]

ಸಿದ್ಧಾರ್ಥ—ಒಂದೆಸಲ, ಒಂದೆಯೊಂದುಸಲ! ಹೋಗಿ
ಕಣ್ಣಿನಾಸೆಯು ತಣಿಸಿ ದಣಿಸಿ ಬರುವೆ.
ಹೋಗಬೇಕೇಕೆ? ಕಳ್ಳಮನವೇ ನಿನ್ನ
ತಿರುಳನಾ ಕಂಡಿಹೆನು. ಆದರೇನೀ ಎದೆಯು
ಶಾಂತವಾಗದು, ಸುಮ್ಮನಿರದಲ್ಲ. ಎಲೆ ಎದೆಯೆ,
ಆಡದಾಟಗಳೆನಿತು ನಿನ್ನುದರದೊಳಗಿಹವು?
ಬೆಳಕ ಕಾಣದೆ ಇರುವ ನುಡಿಗಳೆನಿತಡಗಿಹವು?
ಎನಿತು ಪಿಸುಮಾತುಗಳು ಮಲಗಿಹವು ನಿನ್ನಲ್ಲಿ?
ಒಂದೆ ಸಲ, ಒಂದೆಯೊಂದುಸಲ! ಹೋಗಿ
ಕಣ್ಣಿನಾಸೆಯು ತಣಿಸಿ ದಣಿಸಿ ಬರುವೆ.
ಮತ್ತೊಂದು ಬಯಸದಿಹ ಕಡೆಯ ಮುತ್ತನು ಕೊಟ್ಟು
ಬರುವೆ. ಒಂದೆಸಲ! ಒಂದೆಸಲ! ಒಂದೆಸಲ!

[ತೆರಳುವನು. ಚನ್ನ ರಾಲರು ಹೊರಗೆ ಬರುವರು.]

ರಾಲ— ದೊರೆಯ ಮಕ್ಕಳೆ ಇವರು?

ಚನ್ನ— ಹೌದೊ, ಎಲೆ ಮೂಢ.

ರಾಲ— ಇದೇತಕೆಂತಿಹರು?

ಚನ್ನ— ಬಹುದೂರ ಹೋಗುವರು.

ರಾಲ— ಲಾಯದಾಣೆಗೂ, ಚನ್ನ. ಹಣವಂತರಿಗೆ ಹುಚ್ಚು.

ಚನ್ನ— ಇರಲಿ, ನೀನೋಡು: ನಾ ಹೇಳಿದುದು ಮಾತ್ರ
ಬಿಡದೆ ಮಾಡು.

ರಾಲ— ಹೋಗುವೆನು. ದೇವರೇ. (ತೆರಳುವನು)

ಚನ್ನ— ಉನ್ಮತ್ತನಂತಿಹನು "ಒಂದೆಸಲ." "ಒಂದೆಸಲ!"
ಅದರರ್ಥವೇನೋ ನಾನರಿಯೆ; ನಾನರಿಯೆ.
ನನ್ನ ಕೆಲಸವ ನಾನು ಮಾಡುವೆನು. ಪರಮೇಶ,
ನನ್ನೊಡೆಯನಿಂದು ಹೋಗದ ತೆರದಿ ಮಾಡು
ಪುಣ್ಯಾತ್ಮನಾತನನು ಕೃಪೆಯಿಂದ ಕಾಪಾಡು!

[ಹೊರಡುವನು. ಪರದೆ ಬೀಳುವುದು.]

## ದೃಶ್ಯ ೪

[ಹೆರಿಗೆಮನೆ, ಯಶೋಧರೆಯು ಮಂಚದ ಮೇಲೆ ಮಲಗಿದ್ದಾಳೆ, ಶಿಶುವಾದ ರಾಹುಲನು ತೊಟ್ಟಿಲಲ್ಲಿ ಇದ್ದಾನೆ. ದೂತಿಯರು ಅಲ್ಲಲ್ಲಿ ಮಲಗಿದ್ದಾರೆ. ಸಿದ್ಧಾರ್ಥನ ಪ್ರವೇಶ ಕತ್ತಲು, ದೀಪ ಕೈಲಿ.]

ಸಿದ್ಧಾರ್ಥ— ಧೈರ್ಯವೆದೆಯೇ ಧೈರ್ಯ! ವೈರಾಗ್ಯ ದೇವತೆಯೆ
ಸಲಹೆನ್ನನಿಂದು. ಮೃದುವಾಗು ಎಲೆ ನೆಲವೆ
ಜನಿಸಿರುವ ರಾಹುಲನ ಕೆನ್ನೆಯಂದದೊಳೀಗ!
ಮಿದುವಾಗು ಎಲೆ ನೆಲವೆ! ವೈರಾಗ್ಯವಿಡುತಿರುವ
ಹೆಜ್ಜೆಗಳ ಸಪ್ಪುಳವ ವ್ಯಾಮೋಹವಾಲಿಸದ
ತೆರದಿ. ಭೈರವನ ತಂಬಟೆಯ ರತಿ ಯಾಲಿ-
ಸದ ತೆರದಿ. ಮುಕ್ತಿದೇವಿಯ ಹೆಜ್ಜೆ ಸಪ್ಪುಳವ
ಮಾಯೆಯಾಲಿಸದಂತೆ. ಶಿವನ ವಾಣಿಯ ಮದನ-
ನಾಲಿಸದ ತೆರದಿ! ಮಿದುವಾಗು ಎಲೆ ನೆಲವೇ!
(ಹೆಜ್ಜೆಯಿಡುತ್ತಾ) ಮಿದುವಾಗು! ಮಿದುವಾಗು! ಮಿದು
ವಾಗು! ಮಿದುವಾಗು!

ಸದ್ದೇನು?

ದೂತಿ— (ಕನವರಿಸಿ) ಎನಿತು ಮುದ್ದಾಗಿರುವೆ ರಾಹುಲನೆ?

ಸಿದ್ಧಾರ್ಥ—ಕನವರಿಸು, ಕನವರಿಸು ಎಲೆ ದೂತಿ! ಕನಸಿನೊಳು
ರಾಹುಲನ ಮುದ್ದುಮೋಹವ ಕಂಡು. (ಹುಡುಕುತ್ತಾ)
ಕತ್ತಲೆಯೆ
ಎಲ್ಲಿ ಬಚ್ಚಿಟ್ಟಿರುವೆ ರಾಹುಲ ಯಶೋಧರೆಯರ?
ಇಲ್ಲಿಲ್ಲ! ರಾಮಿಯಿದು! ಕೃಷ್ಣೆಯಿದು! ಗಂಗೆಯಿದು!
(ಕಂಡು) ಅಲ್ಲಿಹುದು! ಅಲ್ಲಿಹುದು ಎನ್ನ ಮುದ್ದಿನ ಕೆಂಡ!

ಮುಟ್ಟಲಾರೆನು ; ಮುಟ್ಟಿದರೆ ಸುಟ್ಟುಬಿಡುವೆ ;
ಮುಟ್ಟದಿರಲಾರೆ ; ತನುಮನಗಳೆಲ್ಲವನು
ಮೋಹಿಸುವ ಕಾಂತಿಯಿಂದೆಸೆಯುತಿಹೆ, ಎಲೆ ಕೆಂಡ !
ಇಲ್ಲಿಗೇತಕೆ ಬಂದೆ ಎಲೆ ಹೃದಯ ? ಮತ್ತೇಕೆ
ಬೆದರಿ ಹಿಂಜರಿಯುತಿಹೆ. ತೃಪ್ತಿಯಾಯಿತೆ ನಿನಗೆ ?
ಇಲ್ಲ, ಇನ್ನೂ ಇಲ್ಲ. ತೃಪ್ತಿಯಾಗುವುದೆಂತು ?

(ದೂತಿಯೊಬ್ಬಳು ಮೈಮುರಿಯುವಳು.)

ಒತ್ತಿಹಿಡಿ ಎಲೆ ನಿದ್ದೆ ; ಒತ್ತಿಹಿಡಿ ದೂತಿಯನು.
ಹೊತ್ತಾಯ್ತು ಹೃದಯವೆ, ಹೊತ್ತಾಯ್ತು, ಬೇಗ !

[ಯಶೋಧರೆಯು ಮಂಚದ ಬಳಿಗೆ ಓಡಿಹೋಗಿ ನಿಂತು]

ಶಾಂತವಾಗೆಲೆ ಎದೆಯೆ ! ತಳಮಳಿಸದಿರು ಮನವೆ !
(ತೊಟ್ಟಲನು ನೋಡಿ) ರಾಹುಲಾ ! ಎನ್ನ ಬೆಳಕಿನ ಕಿರಣ !
ಹೃದಯವೇ
ಮರುಗದಿರು ! (ಹಿಂಜರಿದು ಮತ್ತೆ ಮುಂದಕೆ ಬಂದು)
ಒಂದು ಮುತ್ತನು ಸೆಳೆದು ತೆರಳುವೆನು.
ತಂದೆಯೊಲಿದೀಯುವಾ ಮುತ್ತಲ್ಲವಿದು ಕಂದ ;
ಸಂನ್ಯಾಸಿಯಾಯುತಿಹ ನಿಷ್ಕಾಮ ಚುಂಬನವು.
ಪರಮಾತ್ಮನೀಯುತಿಹ ಮಂಗಳದ ಮುತ್ತು !
ಹೊತ್ತಾಯ್ತು. (ಮುದ್ದಿಸಲು ಬಗ್ಗಿ ಮತ್ತೆ ಬೆದರಿ ಏಳುವನು)
ಸದ್ದೇನು ? (ಸುತ್ತ ನೋಡಿ) ಕಲ್ಪನೆಯ ಸದ್ದು !
ಏಳದಿರು, ಕೂಗದಿರು. ಅಳಬೇಡ ರಾಹುಲಾ.
ನಿನ್ನಳುವಿನೊಳು ಮಹಾಶಕ್ತಿಯಿಹುದಿಂದು.
ಲೋಕಕದು ಬುದ್ಧನಂ ಮನಬಂದರೀಯುವುದು,
ಮನ ಬಾರದಿರಲವನನಿರಗೊಡದೆ ಸೀಯುವುದು !

(ಮುತ್ತಿಟ್ಟು)

ಕಡೆಯ ಮುತ್ತಿದು ಕಂದ, ಮೊದಲ ಮುತ್ತಾದರೂ!

(ಯಶೋಧರೆಯ ಕಡೆಗೆ ತಿರುಗುವನು)

ನಿದ್ರಿಸು ಯಶೋಧರೇ, ನಿದ್ರಿಸೆಲೆ ತಾಯಿ;
ಇಂದು ನಾ ನಿನ್ನ ಸುತ, ಪತಿಯಲ್ಲ, ಪತಿಯಲ್ಲ!
ನೀನೆನಗೆ ದೇವತೆಯು, ನಿನ್ನ ಬಳಿ ನಾ ಸಾರೆ;
ನಿನ್ನ ನಾನಿನ್ನೊಲಿಯೆ, ಭಕ್ತಿಯಿಂ ಪೂಜಿಸುವೆ.

(ಕೇಳುವನು)

ಆಹಾ! ಖುರಪುಟದ ದನಿ! ಹೊತ್ತಾಯ್ತು!
ಹೊತ್ತಾಯ್ತು!
ಬಂದೆ ಚನ್ನಾ ಬಂದೆ! ನಿಮಗೆಲ್ಲ ಮಂಗಳವು

[ಬಾಗಿಲ ಬಳಿ ಹೋಗಿ]

ಎಲೆ ನಿದ್ದೆ ನಿನ್ನುದರವತಿಕಪ್ಪು. ನಿನ್ನ ಬಲೆ-
ಗೊಳಗಾದವರೆ ಬೆಪ್ಪು. ನಿನ್ನ ನಿಂದಿಸುವುದೂ
ತಪ್ಪು. ನೀನೀಗ ಸೂತಿಕಾ ಮಂದಿರವ-
ನಗಲಿದರೆ, ಸಗ್ಗ ಸಿಡಿದೊಡೆಯುವುದು! ಧರೆಯು
ಎದೆ ಬಿರಿಯುವುದು! ಕಂಬನಿಯ ಸೆದೋರೆಯು
ಹರಿಯುವುದು! ಕತ್ತಲೆಯೆ ಜಗದ ದುಃಖವನೆಲ್ಲ
ನುಂಗು! ಹೊತ್ತಾಯ್ತು (ಹೋಗುತ್ತಾ) ನಿಮಗೆಲ್ಲ
ಮಂಗಳವು!

[ಹೋಗುವನು. ಪರದೆ ಬೀಳುವುದು.]

---

# ದೃಶ್ಯ ೫

[ಅರಮನೆಯ ಹೊರಗಡೆ. ಸಿದ್ಧಾರ್ಥನ ಪ್ರವೇಶ.]

ಸಿದ್ಧಾರ್ಥ—ಹನಿಯಿಂದ ಸಾಗರಕೆ ಹಾರೆಲೈ ಧೀರಾತ್ಮ!
ಛವಿಯಿಂದ ರವಿಯೊಳೊಂದಾಗೆಲೈ ವೀರಾತ್ಮ!
ಅಣುವಿಂದ ವಿಭುವಾಗು; ಜೀವನಿಂ ದೇವನೊಳ-
ಗಾಗು! ನಟ್ಟಿರುಳೆ, ಕಟ್ಟಿರುಳೆ ಕರೆದುಕೋ
ಎನ್ನ. ಕಪಿಲವಸ್ತುವೆ ಮಲಗು, ಮಲಗು!
ಚರಮ ವಂದನೆ ನಿನಗೆ. ಅರಮನೆಯೆ, ಮಾಯೆಯಾ
ಸೆರೆಮನೆಯೆ ಎದೆಯಿಂದ ದೂರಸರಿ. ಮಸಣವಾ-
ಗೆಲೆ ಎದೆಯೆ. ಹಳೆಯ ಸಂಸ್ಕಾರಗಳನೆಲ್ಲ
ಭಸ್ಮಮಾಡುವೆನಲ್ಲಿ, ಶಿವನ ಕುಣಿಸುವೆನಲ್ಲಿ!
ರಳಿರಳನೆ ಪುಡಿಯಾಗಿ ಮೋಹ ಬಂಧನಗಳಿರ (ಬಿಚ್ಚಿ)
ಆದರೇನಿದು ಸದ್ದು! ಯಾರೊ ಬರುವಂತಿಹುದು?

[ಮಾರನು ಬರುವನು.]

ನೀನಾರು ಮಧುರ ರೂಪವೆ?

ಮಾರ— ನಾನು ಮಾರ,
ಸಿದ್ಧಾರ್ಥ, ಮೋಹಿನಿಯ ಹಿರಿಯ ಮಗ ನಟ್ಟಿರುಳೊ
ಳಾವೆಡೆಗೆ ಪೊರಮಡುವೆ?

ಸಿದ್ಧಾರ್ಥ— ಬಿತ್ತರದ ಲೋಕಕ್ಕೆ,
ಮಾರ.

ಮಾರ— ಕಪಿಲವಸ್ತುವಿನಗಲ ಸಾಲದೇ
ನಿನಗೆ?

ಸಿದ್ಧಾರ್ಥ— ಸಾಲದೆಲೆ ಮೋಹಿನಿಯ ಮಗನೆ.

ಮಾರ— ಹಾಗಾದರೀ ಧರೆಯ ನಿನಗೀವೆ, ಹಿಂತಿರುಗು,
ಸಿದ್ಧಾರ್ಥ, ಹಿಂತಿರುಗು. ಸರ್ವಸಾಮ್ರಾಜ್ಯ-
ಕಧಿಕಾರಿಯಾಗೆ ಪಟ್ಟಕಟ್ಟುವೆ ನಿನಗೆ.

ಸಿದ್ಧಾರ್ಥ—ಪೊರಮಡುವುದೀ ಭೋಗ ಸಾಮ್ರಾಜ್ಯಕಲ್ಲ
ಮಾರ, ಮುಕ್ತಿಸಾಮ್ರಾಜ್ಯಕ್ಕೆ. ಬ್ರಹ್ಮಾಂಡ-
ದಲ್ಲಿರುವ ಪರಮತವು ಪದಪಿಗಾಗೆಳಸುತಿಹೆ.
ಸರ್ವಸೃಷ್ಟಿಯ ಹರ್ಷಕಾಗೆಳಸುತಿರುವೆ.
ಸರ್ವ ಜೀವರ ಶಾಂತಿಗಾಗೆಳಸುತಿರುವೆ.
ನನ್ನ ಮುಕ್ತಿಯನೊಂದ ನಾನೆಂದು ಬಯಸೆ.
ಎಳೆಯೊಳಣುವೊಂದು ಬಂಧನದ ಬಲೆಯೊಳಗೆ
ಸಿಕ್ಕಿ ಗೋಳಿಡುವಲ್ಲಿ ಪರಿಯಂತ ಮುಕ್ತಿಯಂ
ಬಯಸೆ ನಾ; ಹರ್ಷವಂ ಬಯಸೆ ನಾ; ಶಾಂತಿಯಂ
ಬಯಸೆ ನಾ; ಬರಿದೆ ಮೋಹಿಪುದೇಕೆ ಮಾರ?
ತೊಲಗತ್ತ ತೊಲಗು!

ಮಾರ— ಸಿದ್ಧಾರ್ಥ, ಸ್ವಪ್ನಸ್ಥ-
ನಾಗಿರುವೆ. ಜಾಗ್ರತನ ಮಾತಲ್ಲವೀನುಡಿಯು.
ಬಣಗು ವೇದಾಂತವಿದು. ಜಡರ ಸಿದ್ಧಾಂತವಿದು,
ಮುಕ್ತಿಯೆಂಬುವುದೆಲ್ಲಿ? ಬಡಶಾಂತಿಯೆಲ್ಲಿ?
ಮರುಳನಂತಾಡುತಿಹೆ. ಅರಮನೆಯ ಸಿರಿಯ
ತೊರೆದರಸಲುಳಿದ ಸಿರಿ ದೊರಕುವುದೆ? ಹುಸಿಮಾತು
ಇಹಸುಖವನರಿತಿಹೆವು, ಪರಸುಖವದೆಂತಿಹುದೊ?
ಕರದೊಳಿಹ ರನ್ನವದು ಮಿಗಿಲು ಶರಧಿಯ ಸಿರಿಗೆ!
ಪರಸುಖವ ಪಡೆಯಲೆಂದಿಹ ಸುಖವ ಬಿಡುವೆಯಾ?
ಜೋಕೆ!

ಸಿದ್ಧಾರ್ಥ— ತೊಲಗತ್ತ! ತೊಲಗತ್ತ ಮಾರ!
ಯುಕ್ತಿವಚನಗಳಿಂದ ಮರುಳನಾಗುವೆನೆಂದು
ಬಗೆದಿಂತು ಬೋಧಿಪೆಯ? ಯುಕ್ತಿಗಳನೋದಿಹೆನು
ತರ್ಕ, ಬುದ್ಧಿಯ ವಿಚಾರಲರಿಯುದೆಲೆ ಮಾರ!
ಬುದ್ಧಿಯಾಚೆಯ ಮೇಲೆ ಸಿದ್ಧಿಯೂರೆಂದು ತಿಳಿ.

ಮಾರ— ಪ್ರಿಯವಲ್ಲದಿರಬಹುದು ಹಿತವಚನದೌಷಧಿಯು,
ಸಿದ್ಧಾರ್ಥ. ಆದರೂ ಎಚ್ಚರಿಕೆ! ಎಚ್ಚರಿಕೆ!
ಸ್ವಪ್ನನಿಧಿಯನ್ನರಸಿ ಮರುಳಾಗ ಬೇಡ!
ಎಚ್ಚರಿಕೆ ಸಿದ್ಧಾರ್ಥ. ನಿನ್ನ ಹಿತಚಿಂತಕನು
ನಾನು.

ಸಿದ್ಧಾರ್ಥ— ಸ್ವಪ್ನನಿಧಿ ದೊರಕದಿರೆ, ಎಲೆ ಮಾರ,
ಸ್ವಪ್ನನಿಧಿಯನ್ವೇಷಣೆಯೆ ಇಂಪು, ಸುಖಕರವು,
ಶಾಂತಿಕರ!

ಮಾರ— ಹೆತ್ತ ತಾಯ್ತಂದೆಗಳಿಗೆಲ್ಲ
ಮೋಸಮಾಡುವೆಯೇನು, ಸಿದ್ಧಾರ್ಥ? ಸೋಮಾರಿ
ನೀನು. ಕರ್ಮಕ್ಕೆ ಭಯಪಟ್ಟು, ಕರ್ತವ್ಯ-
ವೆಸಗದಲೆ ಸ್ವಾನಂದಕೆಳಸುತಿಹ ನೀನೆ
ಹೇಡಿ!

ಸಿದ್ಧಾರ್ಥ— ಬೈಯದಿರು ಮಾರ, ಬೈಯದಿರು,
ಕಡಲಾಗಿ ಹಿಂತಿರುಗಲೆಂದೇ ಹನಿಯಾಗಿ
ಹೊರಟಿಹೆನು. ಹನಿಯೊಂದು ಎನಿತು ಕೊಳಕೊಡ್ಡ
ತೊಳೆಯಬಲ್ಲುದು ಮಾರ?

ಮಾರ— ಕಲ್ಲಿನೆದೆ ನಿನ್ನದೈ
ಸಿದ್ಧಾರ್ಥ! ಸತಿಯು ಗೋಳಿಗೆ ನೂಂಕಿ, ಕಂಬನಿಯು
ಕರೆಯುದೆಯೆ ಓಡುತಿಹೆ, ತಸ್ಕರನ ತೆರದಿ!

ಸಿದ್ಧಾರ್ಥ—ಜಗಕಾಗಿ ಕಣ್ಣೀರ ಸುರಿಸುವೆನು ಮಾರ.
ಅದಕಾಗಿ ಸತಿಗಾಗಿ ಕಂಬನಿಯ ಕರೆಯೆ.
ಮುಂದೆದೆಯ ಬೆಣ್ಣೆಯನು ಮಾಡೆ, ಇಂದದನು
ಶಿಲೆಯಾಗಿ ಮಾಡಿರುವೆ. ಮೋಹಿನಿಯ ಮಗನೇ
ತೊಲಗತ್ತ! ತೊಲಗತ್ತ! (ತೆರಳುವನು)

ಮಾರ— ಬಿಡುವೆನೆಂದರಿತಿಹೆಯಾ?
ಎಲೆ ರಾಜಪುತ್ರ, ತುದಿಯ ವರೆಗೂ ನಿನ್ನ-
ನಟ್ಟುವೆನು. ನಿನ್ನಿರವು ಕೆಡುಕೆಮ್ಮ ವಂಶಕ್ಕೆ.
ಕಾಯುವೆನು, ಕಾಯುವೆನು ಎಂದಾದರೊಂದುದಿನ
ನೀನೆನ್ನ ಬಲೆಗೆ ಬೀಳುವ ವರೆಗೆ. ಸಿದ್ಧಾರ್ಥ,
ಮಾರನೊಡ್ಡುವ ಬಲೆಗೆ ಬೀಳದವರಪರೂಪ.
ಒಮ್ಮೆ ತಪ್ಪಿದರೂ ಮಹಾತ್ಮರೇ ಹೌದು.
ಅದರಿಂದ ನೀನೂ ಮಹಾತ್ಮನೇ ಗೌತಮಾ!
ಧರ್ಮಮೋಕ್ಷವೆ ನೀನು ; ನಾನು ಕಾಮಾರ್ಥ!

[ಹೊರಡುವನು. ಪರದೆ ಬೀಳುವುದು.]

---

# ದೃಶ್ಯ ೬

[ರಾಜಬೀದಿ, ರಾಲನ ಪ್ರವೇಶ.]

ರಾಲ— (ಆಕಳಿಸಿ. ಮೈಮುರಿದು) ಕಾದು, ಕಾದೆನೆಗೆ ಸಾಕಾಯ್ತು.
ಏನು ಚಳಿ!
(ಬಲವಾಗಿ ಕಂಬಳಿ ಹೊದೆಯುತ್ತಾ) ಆ ಇಲಿ. ಹಾಳಿಲಿಗೆ....
ಇಲಿಗಳಿವು ಬಡಜನರ
ಪೀಡಿಸುವುವೇ ಹೊರತು ದೊಡ್ಡವರ ತಂಟೆಗೇ
ಕಾಲಿಡವು. ಏನು ತೂತುಗಳಪ್ಪಾ! ಏ ಚಳಿ!
ಹಾಳು ಚಳಿ ತೂತಿದ್ದ ಕಡೆಯೇ ಸುಗ್ಗುವುದು! (ಪುನಃ
ಆಕಳಿಸಿ) ಅವನ ಮಾತೇಕೆ ಕೇಳಿದೆನಪ್ಪಾ; ಈ ಬಂಡಿ
ಹೊಡೆಯುವವರಿಂದ ನಮಗಂತು ಸುಖವಿಲ್ಲ!
ಆ ಚನ್ನಗೇಂ ಮರುಳು! ಅವನ ಕುದುರೆಯ ತಲೆಯು
ಅವನಿಗಿಲ್ಲ. ಅವನ ಚಾಟಿಯ ಚುರುಕು
ಅವನಿಗಿಲ್ಲ. ಮೇಣವನ ಬುದ್ಧಿಯೋ ಕಂಟಕನ
ಲದ್ದಿ. ಅರಮನೆಯ ಬಿಟ್ಟಾರು ಹೋಗುವರು!
ದೊರೆತನವ ಬಿಟ್ಟಾರು ಹೋಗುವರು? ಕೈಹಿಡಿದ
ಹೆಂಡತಿಯ ಬಿಟ್ಟಾರು ಹೋಗುವರು? ಹೆತ್ತ
ಮಗನ ಬಿಟ್ಟಾರು ಹೋಗುವರು? ಏ ಚನ್ನ
ಬೆಂದ ಹುರುಳಿಯ ಬುದ್ಧಿ ನಿನಗಿಲ್ಲ. ಅರವತ್ತ-
ಕರೆಮರುಳು! ನಿನಗೀಗ ಎಪ್ಪತ್ತು! ಅಯ್ಯಯ್ಯೊ
ನಿನ್ನ ಮಾತನು ನಂಬಿ ಬಂದ ನಾನೇ ದೊಡ್ಡ
ಮರುಳು! (ಕುಣಿಕುಣಿದು) ಹಾಳಿರುವೆ, ಕಟ್ಟಿರುವೆ,
ಕಾಸ್ತಾರ-

ನೆಂದು ಕಡಿಯುವನೆಯೂ ಕೊಂದು) ಹೋಗು
ಯಮಪುರಿಗೆ!

ಕುಕ್ಕರಿಸಿ ಕುಗುರುವೆನು.

[ಕುಳಿತು ತೂಕಡಿಸುವನು. ಸಿದ್ಧಾರ್ಥನು ಬರುವನು.]

ಸಿದ್ಧಾರ್ಥ—ಪಾಪ, ಚನ್ನನು ಕಾಯ್ದು ಬಳಲಿದನು. ಹೊತ್ತಾಯ್ತು!
(ಮೇಲೆ ನೋಡಿ) ಚಂದಿರಗೆ ಮಬ್ಬು ಮುಸುಗಿಹುದಿಂದು.
ಕತ್ತಲೆಯೆ
ಯಾರು ಕಾಣದ ತೆರದಿ ನಿನ್ನಾ ಕರಾಳವಹ
ಸೆರಗಿನಿಂದೆನ್ನ ಬಿಗಿಬಿಗಿದು ಸುತ್ತು
(ಮುಂದೆ ಹೋಗಿ ರಾಲನನ್ನು ಎಡವುವನು)

ರಾಲ— (ಬೆಚ್ಚಿ ಬಿದ್ದದ್ದು) ನನ್ನೊಡೆಯ [illegible]ನಲ್ಲ; ಚನ್ನನಾಣತಿಯಂತೆ
ಮಾಡಿದೆನು. ತಪ್ಪಾಯ್ತು! ತಪ್ಪಾಯ್ತು! ತಪ್ಪಾಯ್ತು!

ಸಿದ್ಧಾರ್ಥ—ಯಾರಿವನು? ಪಾಪ! ಅನಾಥನಿರಬೇಕು.
ಕೂಗದಿರು ಭಿಕ್ಷುಕನೆ. (ಸ್ವಗತ) ಮೋಕ್ಷವಾಗಲಿ ಮಾಯೆ-
ಯರಮನೆಯ ಮೆಟ್ಟಲೊಳೆ (ಗಟ್ಟಿಯಾಗಿ) ಮನೆಯಿಲ್ಲವೇ
ನಿನಗೆ?

ರಾಲ— ಲಾಯದಿಂದೋಡಿಸಿದ ನನ್ನೊಡೆಯ. ಮಲಗಿದ್ದೆ.
ತಪ್ಪಾಯ್ತು! ದಮ್ಮಯ್ಯ!

ಸಿದ್ಧಾರ್ಥ— ಮಲಗು ನಡೆ, ಹೋಗಿಗೋ!
(ವಸ್ತ್ರಗಳನ್ನು ಕೊಟ್ಟು ತೆರಳುವನು)

ರಾಲ— (ನಿಟ್ಟುಸಿರು ಬಿಟ್ಟು) ನಿನ್ನ ಮನೆ ಹಾಳಾಗ! ನೀ ಸತ್ತು
ಹೋಗ!
ಚನ್ನ, ನನ್ನ ಕೆಲಸದ ಬಾಯ್ಗೇ ಮಣ್ಣಾಗು-
ತಿತ್ತಲ್ಲ! ಬದುಕಿದೆಯ ಬಡಜೀವ! ಏ ಚನ್ನ,
ನಿನ್ನ ಮನೆ ಹಾಳಾಗ! ನೀ ಸತ್ತೇ ಹೋಗ!
(ಓಡುವನು. ಪರದೆ ಬೀಳುವುದು.)

---

## ದೃಶ್ಯ ೭

[ಬೀದಿಯ ಮತ್ತೊಂದು ಭಾಗ. ಚನ್ನನ ಹಿಂದೆ ಮುಂದೆ ತಿರುಗು
ತ್ತಿರುವನು.]

ಚನ್ನ— (ದೂರ ನೋಡಿ) ಕುಣಿಯದಿರು ಕಂಟಕಾ! ಸುಮ್ಮನಿರು
ರಾಹುತಾ!
(ಮತ್ತೆ ಸುತ್ತ ನೋಡಿ) ಈ ಎಡೆಯೆ ಇರುವಂತೆ ಹೇಳಿದ್ದ
ದವನು!
ರಾಲನೇನೆಸಗಿ[illegible] ಗುಟ್ಟು ಬಯಲಾಯ್ತೊ?
ಏಕಿನ್ನು ಬರಲಿ[illegible]ಚಂದ್ರನೂ ಶೃಂಗಗಳ
ಚುಂಬಿಸುತ ಮರೆಯಾಗುತಿಹನು. ಇನ್ನೇನು?
ಕಗ್ಗತ್ತಲೆಯೆ ಗತಿ. ಕುಳಿತಿಲ್ಲೆ ಕಾಯುವೆನು.

[ಕುಳಿತುಕೊಳ್ಳುವನು. ಸಿದ್ಧಾರ್ಥನ ಪ್ರವೇಶ.]

ಸಿದ್ಧಾರ್ಥ—ಇಂದುವೂ ಮುಳುಗಿದನು! ಚನ್ನನಿರುವುದನರಿಯೆ.
ಕಾದು ಹಿಂತಿರುಗಿದನೊ ಏನೊ? (ಕೂಗಿ) ಚನ್ನಜ್ಜ,
ಚನ್ನಜ್ಜಾ!

ಚನ್ನ— ಸಿದ್ಧಾರ್ಥ!

ಸಿದ್ಧಾರ್ಥ— ಎಲ್ಲಿರುವೆ? ಕಗ್ಗತ್ತಲಿದು ಕಣ್ಣ
ತಿವಿಯುತಿದೆ. ಕಂಟಕನ ತಾ ಬೇಗ, ಹೊತ್ತಾಯ್ತು!

ಚನ್ನ— ಸಿದ್ಧಾರ್ಥ ಕುದುರೆಗಳ ತಂದೆ, ಬಾ ಇಗೋ.

ಸಿದ್ಧಾರ್ಥ—ಕಡಿವಾಣ?

ಚನ್ನ— ಬೇಡವೆಂದೆ; ನೀನೆ.

ಸಿದ್ಧಾರ್ಥ— ಹೌದೌದು!
ಮರೆತಿದ್ದೆ. ಹತ್ತು ರಾಹುತನ ಚನ್ನಜ್ಜ.
ಹತ್ತಿದೆಯ?

ಹತ್ತಿದೆನು !

(ಕುದುರೆಯನ್ನು ಸಂಬೋಧಿಸಿ ನುಡಿಯುವನು.)

ಮೈದಡ್ಡು ಹಯುವೇ ಹೊರಡು ; ನಡೆ ಮುಂದೆ, ಮುಂದೆ ;
ಜಗದ ಬೆಳಕನು ಹೊತ್ತು ಜವದಿಂದ ನಡೆ ಮುಂದೆ.
ತಿರೆಯ ಕತ್ತಲು ತುಂಬಿ ಕಾಳವಾಗಿರಲು
ನಿಶೆಯುಗರ್ಭವ ಹೊಕ್ಕು ಜಗಕೆ ಬೆಳಕನು ತಂದೆ
ಎಂಬ ಕೀರ್ತಿಯು ನಿನ್ನದಾಗುವುದು ; ಎಲೆ ಹಯುವೆ
ನಡೆ ಮುಂದೆ, ಮುಂದೆ. [illegible] ಪ್ರೀತಿಯು ನಿನಗೆ,
ಬೆನ್ನಿನೊಳು ಜಗದ ಜ್ಯೋತಿ [illegible] ಕುಳಿತು ತಳಿಸುತಿದೆ.
ನಿಶೆಯು ಗರ್ಭವ ನುಗ್ಗು ; ನಡೆ ಹಯುವೆ, ನಡೆ ಮುಂದೆ,
ಮುಂದೆ. ಜೀವ ಜ್ಯೋತಿಯು ಹೊರುವ ಪುಣ್ಯವೊದ-
ಗಿದೆ ಇಂದು. ನೀನೆ ಧನ್ಯನು ಹಯುವೆ. ನೀನಿಂದು
ಇಳೆಯು ತಿಮಿರವ ಹರಿವ ಪಂಜುಗಾರನು, ತೇಜಿ.
ಜಗದ ಪುಣ್ಯದ ಭಾರ ನಿನ್ನ ಬೆನ್ನಿನ ಮೇಲೆ.
ಕೋಟಿ ಜೀವರ ಬಿದಿಯು, ಕೋಟಿಯುರಸರ ಬಿದಿಯು,
ನಿನ್ನ ಬೆನ್ನಿನೊಳಿಹುದು. ಓಡು, ನಡೆ, ಓಡು, ನಡೆ,
ನಡೆ ಮುಂದೆ, ಹರಿಯೆ. ನಿನ್ನ ನಡೆಯೊಂದರೊಳು
ಕುಕ್ಕೋಟ ಒಂದೊಂದರೊಳಗಿಂದು ಲಕ್ಷಾಂತ-
ರಾತ್ಮರಿಗೆ ಸೊದೆಯುಂಟು. ನಿನ್ನಡಿಯದೊಂದರೊಳು
ತಿರೆಯ ಚರಿತೆಯು ಬಿದ್ದು ಮುಳುಗೆದ್ದು ತೇಲುತಿದೆ.
ಅಮಿತ ಸಂಖ್ಯೆಯು ಜನರ ಪುಣ್ಯ ಭಾರವನಿಂದು
ಹೊತ್ತಿರುವೆ. ಜಗ್ಗದಲೆ, ಕುಗ್ಗದಲೆ, ನುಗ್ಗಿ ನಡೆ
ಮುಂದೆ. ವಾಜಿಯೇ ನಡೆ ಮುಂದೆ, ಮುಂದೆ.
ಬಾಳ ಮೋಹವ ಕುಟ್ಟಿ, ದರ್ಪಸಂಪದವಟ್ಟಿ,

ವಿಷಯ ಸುಖಗಳ ಮೆಟ್ಟಿ, ಸಿರಿಯ ತರಿದಟ್ಟಿ,
ನಡೆ, ಹಯವೆ, ಕಂಟಕನೆ ನಡೆ ಮುಂದಕೀಗ!
ಎದೆಯ ಕೀಳಾಸೆಗಳನೆಲ್ಲವನು ಸುಟ್ಟು,
ಮನದ ಸಂದೇಹಗಳನೆಲ್ಲವನು ಬಿಟ್ಟು,
ಪರಮಾತ್ಮನಲ್ಲಚಲ ಭಕ್ತಿಯನ್ನಿಟ್ಟು,
ವೈರಾಗ್ಯವನು ತೊಟ್ಟು, ಮುಕ್ತಿಯನ್ನುಟ್ಟು,
ನಡೆ, ಧೀರ ಕಂಟಕನೆ, ನಡೆ ಮುಂದೆ, ಮುಂದೆ,
ಓಡು, ನಡೆ; ಓಡು ನಡೆ, ನಡೆ ಮುಂದೆ, ಮುಂದೆ!

[ತೆರಳುವನು. ಪರದೆ ಬೀಳುವುದು.]

---

## ದೃಶ್ಯ ೮

[ಮೇಘಮಂಡಲದಲ್ಲಿ ಯಕ್ಷ ಕಿನ್ನರ ಗಂಧರ್ವರು ಬರುವರು.]

ಯಕ್ಷ— ಚೆಲ್ಲು! ಹೂಗಳ ಚೆಲ್ಲು! ಕಿನ್ನರಾ ನೋಡಲ್ಲಿ!
ಅಲ್ಲಿ! ಅನಿಲವೇಗದ ವಿಹಾರಿ ಓಡುತಿವೆ
ಕುದುರೆಗಳು. ಚೆಲ್ಲು, ಹೂಗಳ ಚೆಲ್ಲು; ಪಥವೆಲ್ಲ
ಮೃದುವಾಗಿ ಖುರಪುಟದ ದನಿಯಾಗದಂತೆ.

ಗಂಧರ್ವ—ಚಿಂತೆಯೋಟವ ಮುಂಚಿ ಸಾಗುತಿವೆ ವಾಜಿಗಳು.

ಕಿನ್ನರ— ಮಿಂಚಿನೋಟವ ನಗುತ ನುಗ್ಗುತಿವೆ, ನೋಡು.
ಓಡಿ, ಹಯಗಳೆ, ಓಡಿ, ದೇವದೂತರು ಇಂದು
ನಾವಲ್ಲ, ನೀವು!

ಗಂಧರ್ವ— ಕೆಲಸ ಕೆಟ್ಟಿತು ಈಗ!

ಯಕ್ಷ— ಏನು, ಗಂಧರ್ವ?

ಗಂಧರ್ವ— ನೋಡಲ್ಲಿ, ಗಿರಿಯಂತೆ
ನಿಂತಿಹುದು ಕೋಟೆಗಳ ಹೆಬ್ಬಾಗಿಲು!

ಕಿನ್ನರ— ಇನ್ನಾವ ಹಾದಿಯಿಲ್ಲವೆ, ಯಕ್ಷ?

ಯಕ್ಷ— ನಾನರಿಯೆ!

ಕಿನ್ನರ—ಬನ್ನಿ, ನಾವೆ ತೆರೆಯುವ, ಬನ್ನಿ!

[ತೆರಳುವರು. ಪರದೆ ಬೀಳುವುದು.]

---

## ದೃಶ್ಯ ೯

[ಕಪಿಲವಸ್ತುವಿಗೆ ಬಹುದೂರದಲ್ಲಿ. ಕತ್ತಲು. ಚನ್ನ, ಸಿದ್ಧಾರ್ಥರು ಬರುವರು.]

ಚನ್ನ— ಸಿದ್ಧಾರ್ಥ! ಸಿದ್ಧಾರ್ಥ! ಸಾಕಾಯ್ತು ಎನಗೆ!
ತಲೆ ತಿರುಗುತಿಹೆ, ಎದೆ ಹಾರುತಿದೆ ಸಿಲ್ಲು.

ಸಿದ್ಧಾರ್ಥ—(ನಿಂತು) ಚನ್ನಜ್ಜ, ಚನ್ನಜ್ಜ, ಏನಾಯ್ತು, ಏನಾಯ್ತು;

ಚನ್ನ— ನನ್ನೊಡೆಯ, ಸ್ವಲ್ಪ ವಿಶ್ರಮಿಸಿ ಹೊರಡೋಣ!
ನೀನು ತರುಣನು ಒಡೆಯ, ನಾನು ನರೆತವನಪ್ಪಾ!

ಸಿದ್ಧಾರ್ಥ—(ಹತ್ತಿರ ಬಂದು) ಕುದುರೆಯಿಂದಿಳಿ ಕೆಳಗೆ ಚನ್ನಜ್ಜ!

ಚನ್ನ— (ಇಳಿಯುತ್ತ) ಸಿದ್ಧಾರ್ಥ
ಏನೋಟವಪ್ಪಾ ಏನೋಟ! ದೇಹವೇ
ನುಗ್ಗುನುರಿಯಾಗುತಿದೆ.

ಸಿದ್ಧಾರ್ಥ— ಕುಳಿತುಕೋ ಚನ್ನಜ್ಜ;
ಗಾಳಿ ಬೀಸುವೆನು. (ಗಾಳಿ ಬೀಸುವನು)

ಚನ್ನ— ಅಪ್ಪಪ್ಪ! ಅಬ್ಬಬ್ಬಾ!

ಸಿದ್ಧಾರ್ಥ—ದೂರವೆನಿತಾಯಿತ್ತೀಗ ಚನ್ನಜ್ಜ, ಪಟ್ಟಣವ
ಬಿಟ್ಟು?

ಚನ್ನ— ಹದಿನಾರು ಯೋಜನಗಳಾದುವೈ
ಗೌತಮಾ!

ಸಿದ್ಧಾರ್ಥ— ಈಗ ನಾವೆಲ್ಲಿಹೆವು?

ಚನ್ನ— ಕೋಲಿದೇಶವ ದಾಂಟಿ ಬಂದಿಹೆವು.

ಸಿದ್ಧಾರ್ಥ—ಉದಯವೆಮ್ಮನು ಅನುಮಾತರಂಗಿಣಿಯ
ತೀರದಲ್ಲೆದುರುಗೊಳ್ಳಬೇಕಜ್ಜಾ. ಹೊರಡೋಣ.

ಚನ್ನ— ಗಳಿಗೆಯೊಂದಿಲ್ಲಿದ್ದು ಹೊರಡೋಣ.

ಸಿದ್ಧಾರ್ಥ—                                        ನಿಸ್ಸಾಸೆ!
ಚನ್ನ— ಮಲಗಿಕೊಳ್ಳುವೆ ನಾನು, ಸಿದ್ಧಾರ್ಥ.
ಸಿದ್ಧಾರ್ಥ—                                        ಮಲಗಿಕೋ

ಚನ್ನಜ್ಜ. (ಚನ್ನನು ಮಲಗಿ ನಿದ್ರಿಸುವನು.)
ಮಲಗು ಮುದುಕಾ, ಮಲಗು.
ನೀನಿನ್ನು ನನ್ನೊಡನೆ ಬರಲಾರೆ. ಹೋಗು,
ಕಪಿಲವಸ್ತುವಿಗೆಲ್ಲ ಸಿದ್ಧಾರ್ಥನೀಕತೆಯು
ಹೇಳು. ಶಾಕ್ಯ ಜನರಿಗೆ ನೃಪನೊರೆ, ಹೋಗು!
ನಾನಿನ್ನು ಲೋಕದ ಮಹಾಂಬುಧಿಗೆ! ನೀಬೀಳ-
ಲಾರೆ ಎನ್ನೊಡನೆ. ನೀನೆನ್ನನಗಲುವುದು
ಬಹುಕಷ್ಟ. ತಂದೆಯಂತೊಲಿದಿರುವೆ ಎನ್ನ.
ಸರ್ವದಾ ಭಕ್ತಿಯಿಂ ಸೇವಿಸಿದೆ ಚನ್ನ. (ಕೊಡುತ್ತಾ)
ತೆಗೆದುಕೋ ಈ ನನ್ನ ಒಡವೆಗಳ. ತೆಗೆದುಕೋ
ನಿನಗಾಗಿ ತಂದ ಈ ರನ್ನಗಳ, ತೆಗೆದುಕೋ
ವಸನಗಳ. ತೆಗೆದುಕೋ ಈ ಎನ್ನ ಹೃದಯವನು.
ನೀನೇಳುವಲ್ಲಿ ಪರಿಯಂತ ನಾನಡಗಿ
ಮೇಲೆ ದಾರಿಯ ಹಿಡಿವೆ. ಎಲ್ಲಕೂ ಮಿಗಿಲಾಗಿ
ನಿನ್ನನೊಲಿದಿದ್ದೆ; ಚನ್ನಜ್ಜಾ, ಸೂತಿಕಾಗೃಹದಿಂದ
ನಾನಿನಿತು ಶೋಕದಿಂ ಪೊರಮಟ್ಟು ಬರಲಿಲ್ಲ.
ಎಂದಾದರೊಂದುದಿನ ಬಂದು ಕಾಣುವೆ ನಿನ್ನ,
ಹೋಗಿ ಬರುವೆನು ಚನ್ನ; ನಿನಗೆ ಮಂಗಳವುಕ್ಕೆ!
(ಕುದುರೆಯೊಡನೆ ಹೊರಡುವನು.)

ಚನ್ನ— (ತುಸು ಹೊತ್ತಿನ ಮೇಲೆ ಎದ್ದು)
ಸಿದ್ಧಾರ್ಥ ಹೊತ್ತಾಯ್ತು, ಹೊರಡೋಣ ಏಳು;
ನಿನಗು ನಿದ್ದೆಯೆ ಒಡೆಯ. ಸಿದ್ಧಾರ್ಥ ಸಿದ್ಧಾರ್ಥ!
(ಹುಡುಕಿ)

ಸಿದ್ಧಾರ್ಥ— ತೊಲಗತ್ತ! ತೊಲಗತ್ತ ಮಾರ!
ಯುಕ್ತಿವಚನಗಳಿಂದ ಮರುಳನಾಗುವೆನೆಂದು
ಬಗೆದಿಂತು ಬೋಧಿಪೆಯ? ಯುಕ್ತಿಗಳನೋದಿಹೆನು
ತರ್ಕ, ಬುದ್ಧಿಯ ವಿಚಾರಲರಿಯದೆಲೆ ಮಾರ!
ಬುದ್ಧಿಯಾಚೆಯ ಮೇಲೆ ಸಿದ್ಧಿಯೂರೆಂದು ತಿಳಿ.

ಮಾರ— ಪ್ರಿಯವಲ್ಲದಿರಬಹುದು ಹಿತವಚನದೌಷಧಿಯು,
ಸಿದ್ಧಾರ್ಥ. ಆದರೂ ಎಚ್ಚರಿಕೆ! ಎಚ್ಚರಿಕೆ!
ಸ್ವಪ್ನನಿಧಿಯನ್ನರಸಿ ಮರುಳಾಗ ಬೇಡ!
ಎಚ್ಚರಿಕೆ ಸಿದ್ಧಾರ್ಥ. ನಿನ್ನ ಹಿತಚಿಂತಕನು
ನಾನು.

ಸಿದ್ಧಾರ್ಥ— ಸ್ವಪ್ನನಿಧಿ ದೊರಕದಿರೆ, ಎಲೆ ಮಾರ,
ಸ್ವಪ್ನನಿಧಿಯನ್ವೇಷಣೆಯೆ ಇಂಪು, ಸುಖಕರವು,
ಶಾಂತಿಕರ!

ಮಾರ— ಹೆತ್ತ ತಾಯ್ತಂದೆಗಳಿಗೆಲ್ಲ
ಮೋಸಮಾಡುವೆಯೇನು, ಸಿದ್ಧಾರ್ಥ? ಸೋಮಾರಿ
ನೀನು. ಕರ್ಮಕ್ಕೆ ಭಯಪಟ್ಟು, ಕರ್ತವ್ಯ-
ವೆಸಗದಲೆ ಸ್ವಾನಂದಕೆಳಸುತಿಹ ನೀನೆ
ಹೇಡಿ!

ಸಿದ್ಧಾರ್ಥ— ಬೈಯದಿರು ಮಾರ, ಬೈಯದಿರು,
ಕಡಲಾಗಿ ಹಿಂತಿರುಗಲೆಂದೇ ಹನಿಯಾಗಿ
ಹೊರಟಿಹೆನು. ಹನಿಯೊಂದು ಎನಿತು ಕೊಳಕೊಡ್ಡ
ತೊಳೆಯ ಬಲ್ಲುದು ಮಾರ?

ಮಾರ— ಕಲ್ಲಿನೆದೆ ನಿನ್ನದೈ
ಸಿದ್ಧಾರ್ಥ! ಸತಿಯ ಗೋಳಿಗೆ ನೂಂಕಿ, ಕಂಬನಿಯ
ಕರೆಯುದೆಯೆ ಓಡುತಿಹೆ, ತಸ್ಕರನ ತೆರದಿ!

## ದೃಶ್ಯ ೧೦

[ಅನುವಮಾ ಹೊಳೆಯ ದಡ. ಸಿದ್ಧಾರ್ಥನ ಪ್ರವೇಶ.]

ಸಿದ್ಧಾರ್ಥ—ನಿಲ್ಲಿಲ್ಲಿ ಕಂಟಕಾ, ನಿಲ್ಲಿಲ್ಲಿ! ಅನುವಮಾ ತ-
ರಂಗಿಣಿಯು ನಿರ್ಮಲ ಸುವಾರಿಗಳಸೀಂಟು!
ವೈರಾಗ್ಯಯಜ್ಞಕ್ಕೆ ಬಲಿಯಾಗಲೆಂದುಳಿದ
ಕಡೆಯ ಸಂಗವು ನೀನು. ಸತಿಸುತರ ಮೋಹ ಬಂ-
ಧನ ಕಠಿನ. ಕಷ್ಟವಾಯ್ತೆನಗದರ ಖಂಡಿಪುದು.
ಚನ್ನ ಸಂಗದ ಮೋಹ ಬಂಧನವು ಕಠಿನತರ!
ಎನಗದರ ಹರಿಯುವುದು ಕಷ್ಟತರವಾಯ್ತು!
ಕಂಟಕನ ಸಂಗವಿದು ಕಠಿನತಮ. ಮೋಣಿದರ
ಖಂಡಿಪುದು ಕಷ್ಟತಮ. ಅವರೆಲ್ಲ ಮಾನವರು,
ನೀನು ಪಶು ಕಂಟಕಾ! ಅದಕಾಗಿ ಎನ್ನೆದೆಯು
ಕುದಿಯುತಿದೆ. ಹಿಂದೆಂದು, ಹಿಂದಾರು, ಎಂದೆಂದು
ಸಾಧಿಸದ ಸಾಹಸವನೆಸಗಿರುವೆ. ಕಂಟಕನೆ!
ಅದರಿಂದ ಧನ್ಯನಾಗಿಹೆ ಹೋಗು. ಸೇರು
ಕಪಿಲವಸ್ತುವ ಬೇಗ. ಎನ್ನವರು ಬಂದು
ಕೇಳುವರು ನಿನ್ನ. ತಲೆದೂಗಿ ಸುಮ್ಮನಿರು.
ತಲೆಯನೇತಕೆ ತೂಗುತಿಹೆ ಇಂತು? ನೀನೆನ್ನ-
ನರಿಯುವೆಯಾ? ಹೋಗು, ಕಂಟಕ, ಹೋಗು;
ನೋಡಲ್ಲಿ!
ಪೂರ್ವ ದಿಗ್ವಧುವಿನೊಡಗೂಡಿ ಉಷೆ ನಲಿಯುವಳು!
ಹೋಗು ಎಲ್ಲಿಯೂ, ನಿಲ್ಲದೆಯೆ ಹೋಗು.
ನೀನು ಕಣ್ಮರೆಯಾಗುವಲ್ಲಿ ಪರಿಯಂತವೂ

ಕಣ್ದಣಿಯೆ ನೋಡುವೆನು! (ನೋಡುತ್ತಾ, ನಿಂತು, ನಿಟ್ಟುಸಿ
ರೆಳೆದು) ಪಾಪ! ಬಡಜಂತು!
ಏನ ಚಿಂತಿಸಿ ತೆರಳಿತೋ ತಿಳಿಯೆ. ಬಾ ಉದಯ,
ಬಾ; ಇಳೆಗೆ ಬೆಳಕ ತಾ! (ತಿರುಗಿ) ಯಾರಿವನು ಮರಳಲ್ಲಿ!
ಬಾ ಇಲ್ಲಿ ಸೋದರನೆ. (ತಿರುಕನು ಬರುವನು) ಬಡವಸ್ತ್ರಗಳ
ನೀಡು,
ಸಿರಿಯ ಕೇತನಗಳಿವು ತೆಗೆದುಕೋ; ನೋಡು!

ಭಿಕ್ಷುಕ—ಮಹಾತ್ಮ ನೀನಾರು?

ಸಿದ್ಧಾರ್ಥ— ಅದನರಿಯೆ ಹೊರಟಿಹೆನು.

(ಬಟ್ಟೆಗಳನ್ನು ಬದಲಾಯಿಸುವರು.)

ನೀನೀಗ ರಾಜನಂತೆಸೆಯುತಿಹೆ ಸೋದರನೆ.
ಬೇಡುವವರಲ್ಲೆನಿತು ರಾಜರುಗಳಿಲ್ಲ,
ರಾಜರಲ್ಲೆನಿತು ಭಿಕ್ಷುಕರಿಲ್ಲ! ಬೇಡುವವ-
ರಲ್ಲೆನಿತು ನೀಡುವವರಿಲ್ಲ! ನೀಡುವವ-
ರಲ್ಲೆನಿತು ಬೇಡುವವರಿಲ್ಲ! ತೆರಳು, ನಲಿ,
ಸೋದರನೆ. ನಿನ್ನ ನಲ್ಮೆಯೆ ನನ್ನ ನಲ್ಮೆ. (ತೆರಳುವನು)

ಭಿಕ್ಷುಕ—ಶಿವನ ಬಟ್ಟೆಯನುಟ್ಟ ನೀನೆ, ಧನ್ಯನು ಇಂದು.
ಸಿದ್ಧಾರ್ಥ! ಶಿವನಾದೆ ಮುಂದೆ ಎಂದೆಂದು!

[ಹೋಗುವನು. ಪರದೆ ಬೀಳುವುದು.]

---

## ಉಪಸಂಹಾರ ದೃಶ್ಯ

[ಬಾಂದಳದ ನಡುವೆ. ಮುಗಿಲತೇರಿನಲ್ಲಿ ಯಕ್ಷ, ಕಿನ್ನರ, ಗಂಧರ್ವರು ಕುಳಿತಿದ್ದಾರೆ.]

ಗಂಧರ್ವ—ಏಳು, ಮೇಲೇಳು! ಎಲೆ ಮೇಘರಥವೇ!

ಕಿನ್ನರ— ದಾರಿ ಬಿಡು! ದಾರಿ ಬಿಡು! ಎಲೆ ವಾಯುಪಥವೆ!

ಯಕ್ಷ— ನಾವು ಮೇಲೇರುತಿರೆ, ರಮಣೀಯವಾಗುತ್ತ-
ಲಿಹುದು ತಿರೆ!

ಗಂಧರ್ವ— ಗಿರಿಶೃಂಗ ಹಳ್ಳಕೊಳ್ಳಗಳೆಲ್ಲ
ಸಮತೆಯನ್ನೈದುತಿವೆ!

ಕಿನ್ನರ— ಹಿಮಗಿರಿಗೆ! ಹಿಮಗಿರಿಗೆ!
ಎಲೆ ಮೇಘರಥವೇ!

ಯಕ್ಷ— ಕಳೆದ ರಾತ್ರಿಯ ತೆರೆದ
ರಾತ್ರಿಯನು ಕಂಡಿಲ್ಲ.

ಗಂಧರ್ವ— ಅದು ಮಹಾರಾತ್ರಿ!

ಕಿನ್ನರ— ನೋಡಲ್ಲಿ! ರವಿಯುದಯ ಪೂರ್ವಗಿರಿ ಶಿಖರದೊಳು!

ಯಕ್ಷ— ನೋಡಲ್ಲಿ! ಮತ್ತೊಂದು ರವಿಯುದಯವೆಸೆದಿಪುದು,
ಅನುಮಾ ನದಿಯ ತೀರದರೆಯಲ್ಲಿ! ಅಮಲತರ!

ಕಿನ್ನರ— ರವಿಯಿಬ್ಬರೊಂದುದಯ! ಹಳೆಯ ಸೂರ್ಯನು ಉದಯ-
ಗಿರಿಶಿಖರದಲ್ಲಿ! ಹೊಸನೇಸರನು ಮಾತ-
ರಂಗಿಣಿಯ ತೀರದರೆಯಲ್ಲಿ!

ಗಂಧರ್ವ— ಹಳೆಯ ರವಿ
ದಿನಪ!

ಯಕ್ಷ— ಹೊಸ ರವಿಯು ಜನಪ! ನೋಡಲ್ಲಿ!
ಮರ್ತ್ಯನಯನಂಗಳಿಗೆ ಕಾಣದಿಹ ಅಧಿಕಾರ
ಮಕುಟವದು ಎಂತು ಶೋಭಿಪುದಲ್ಲಿ ಮೂಜಗದ
ಕತ್ತಲನ್ನೋಡಿಸುವ ತೆರದಿ.

ಗಂಧರ್ವ— ಸಿದ್ಧಾರ್ಥ-
ನಿನ್ನೆಂದು ಬುದ್ಧ!

ಕಿನ್ನರ— ಮುಂದಾಗುವನು ಸಿದ್ಧ!

ಯಕ್ಷ— ಹಿಮಗಿರಿ! ಹಿಮಗಿರಿ! ನಿಲ್ಲೆಲ್ಲೈ ಮೇಘ!

ಗಂಧರ್ವ—ಬನ್ನಿ, ನಮ್ಮೂರ ಸೇರೋಣ ಬೇಗ.

ಕಿನ್ನರ— ಬುದ್ಧ ದೇವನ ಪರಮತ್ಯಾಗವೆ ಮಹಾತ್ಯಾಗ!

ಯಕ್ಷ— ಧನ್ಯಂ ಮಹಾರಾತ್ರಿ!

ಕಿನ್ನರ— ಜನತೆಗುದಿಸಲಿ ಮೈತ್ರಿ!

[ತೆರಳುವರು. ಪರದೆ ಬೀಳುವುದು.]



## ಪಾತ್ರಗಳು

| | |
|---|---|
| ಕೃಷ್ಣ | ಕೌರವ |
| ರುದ್ರ | ಧೃತರಾಷ್ಟ್ರ |
| ಧರ್ಮರಾಯ | ವಿದುರ |
| ಭೀಮ | ಸಂಜಯ |
| ಅರ್ಜುನ | ಅಶ್ವತ್ಥಾಮ |
| ಸಹದೇವ | ಗಾಂಧಾರಿ |
| ಕುಂತಿ | ಭಾನುಮತಿ |
| ದ್ರೌಪದಿ | ಗೀರ್ವಾಣ |
| ಮಾತೆ | ನೀಲಾಕ್ಷ |
| ಕಂದ | ಚಾಣೂರ |
| | ಮುದುಕಿ |

ಕಲಿ

ದ್ವಾಪರ

ಮರುಳುಗಳು

ಬಂಧುಗಳು, ಪರಿವಾರದವರು, ಸೈನಿಕರು, ಸಖಿಯರು ಇತ್ಯಾದಿ.

# ಶ್ಮಶಾನ ಕುರುಕ್ಷೇತ್ರಂ

---

## ದೃಶ್ಯ ೧

[ಹದಿನೆಂಟು ದಿನಗಳು ರಣಕೋಲಾಹಲದಿಂದ ತುಂಬಿ ತುಳುಕಿದ ಮಹಾಭಾರತ ಸಂಗ್ರಾಮವು ಸಂಪೂರ್ಣವಾಗಿ ಕೊನೆಗೊಂಡ ದಿನದ ಘೋರ ವಿಷಣ್ಣ ರಾತ್ರಿ. ಅದುವರೆಗೂ ರಣರಂಗವಾಗಿದ್ದ ಕುರುಕ್ಷೇತ್ರವು ಅಂದು ಭೀಷಣ ಶ್ಮಶಾನಮಾತ್ರವಾಗಿದೆ. ವಿಸ್ತಾರವಾಗಿರುವ ಆ ರಣಭೂಮಿಯು ಬಯಲಿನಲ್ಲಿ ಕಗ್ಗತ್ತಲು ಕವಿದುಕೊಂಡಿದೆ. ಕೋಟ್ಯನುಕೋಟಿ ಯೋಧರ ಶವಗಳೂ, ಅಸಂಖ್ಯವಾದ ಆನೆ ಕುದುರೆ ತೇರುಗಳೂ ಮಂದೆ ಮಂದೆಯಾಗಿ ಮುದ್ದೆ ಮುದ್ದೆಯಾಗಿ ಅಸ್ತವ್ಯಸ್ತವಾಗಿ ಆ ಬಿತ್ತರದ ಬಯಲಿನ ತುಂಬ ಬಿದ್ದಿವೆ. ಸಾಯುವವರೂ ಗಾಯಪಟ್ಟವರೂ ನರಳುತ್ತಿದ್ದಾರೆ. ಇರುಳಿನ ಗರ್ಭದಿಂದ ಹೊರಟ ಆ ರೋದನಧ್ವನಿಯು ಕುರುಕ್ಷೇತ್ರವನ್ನೆಲ್ಲ ಆವರಿಸಿದೆ. ಆದರೂ ಆ ಗೋಳಿನ ಧ್ವನಿಯನ್ನು ತಿಂದು ತೇಗುವಂತೆ ಯಾವುದೋ ಒಂದು ಭಯಾನಕವಾದ ಮೃತ್ಯುಮೌನವು ಆ ರುದ್ರಪ್ರದೇಶದಲ್ಲಿ ಸುಳಿದಾಡುತ್ತಿದೆ. ಹೆಪ್ಪುಗಟ್ಟಿದಂತಿರುವ ಆ ಕತ್ತಲಲ್ಲಿ, ಆ ವಿಸ್ತಾರವಾದ ಕುರುಕ್ಷೇತ್ರದ ಬಯಲಿನಲ್ಲಿ ಸಾವಿರಾರು ಅಸ್ಪಷ್ಟ ಆಕೃತಿಗಳು, ಅರೆಮುಸುಗುಹಾಕಿಕೊಂಡು ಸುಳಿದಾಡುವ ಮನುಷ್ಯ ವ್ಯಕ್ತಿಗಳು, ಕೈಯಲ್ಲಿ ಸೊಡರು ಹಿಡಿದು ಏನನ್ನೋ ಹುಡುಕುವಂತೆ ಅಲ್ಲಲ್ಲಿ ಚರಿಸುತ್ತಿವೆ. ಅವರೆಲ್ಲ ಭಾರತ ಯುದ್ಧದಲ್ಲಿ ಮಡಿದವರ ಬಂಧುಗಳು. ತಂದೆತಾಯಂದಿರು, ಅಣ್ಣತಮ್ಮಂದಿರು, ಅಕ್ಕತಂಗಿಯರು, ಸತಿಯರು, ಮಕ್ಕಳು, ಮುದುಕರು. ಕೌರವ ಪಾಂಡವ ಪಕ್ಷದವರು ಅಂದು ಶ್ಮಶಾನದಲ್ಲಿ ಭೇದವಿಲ್ಲದೆ ತಮ್ಮ ತಮ್ಮ ಸಂಬಂಧಿಷ್ಟರ ದೇಹಗಳನ್ನು ಅರಸುತ್ತಿದ್ದಾರೆ. ಎತ್ತ ನೋಡಿದರೂ ದುಃಖಮಯವಾದ ರುದ್ರ ದೃಶ್ಯ. ಆ ದಿನ ಸಾಯಂಕಾಲ ಭೀಮ ದುರ್ಯೋಧನರ ಗದಾಯುದ್ಧವು ಪೂರೈಸಿದೆ. ಕೌರವೇಂದ್ರನು ತೊಡೆಯೊಡೆದು ಮುಡಿಯುಡಿದು ವೈಶಂಪಾಯನ ಸರಸ್ಸಿನ ತೀರದಲ್ಲಿ ನರಳುತ್ತ ಇನ್ನೂ ಜೀವದಿಂದಿದ್ದಾನೆ. ಅದೇ ರಾತ್ರಿ ದ್ವಾಪರಯುಗವು ಮುಗಿದು ಕಲಿಯುಗವು ಪ್ರಾರಂಭವಾಗುವುದು, ಅಂದಿಗೆ

ದ್ವಾಪರ ಯುಗದ ಶ್ರೇಷ್ಠತಮ ಸಂಸ್ಕೃತಿಯೆಲ್ಲ ವಿನಾಶಯೊಂದಿ ಶ್ಮಶಾನ ಕುರುಕ್ಷೇತ್ರ ದಲ್ಲಿ ಪರಿಣಮಿಸಿದೆ. ಆ ರಂಗದ ಮಧ್ಯೆ ಧೀರನಾದರೂ ದುಃಖಮುಖಮುದ್ರೆ ಯಿಂದ ಕುಗ್ಗಿಹೋದ ಯುಗಪುರುಷ ದ್ವಾಪರನು ಚಿಂತಾಕ್ರಾಂತನಾಗಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಪ್ರವೇಶಿಸುವನು. ಎತ್ತರದ ಆಳ ; ವೀರ ವ್ಯಕ್ತಿ. ರಾಜ ವೈಭವದ ಚಿಹ್ನೆಗಳೆಲ್ಲವೂ ಆತನಲ್ಲಿ ತೋರುವುವು. ತಲೆಯಮೇಲೆ ಕಿರೀಟವೊಂ ದಿರುವುದು. ಒರೆಸೇರಿದ ಕತ್ತಿಯೊಂದು ಸೊಂಟದಲ್ಲಿ ನೇತಾಡುತ್ತಿದೆ. ಆತನನ್ನು ನೋಡಿದರೆ ಏನೋ ಒಂದು ಗೌರವವುಂಟಾಗುವುದು. ಮುಖಚಿಹ್ನೆಯು ವಿಷಣ್ಣ ವಾಗಿದ್ದರೂ ಅದು ಅಲ್ಪಾತ್ಮನ ಅಧೀರತೆಯ ಖಿನ್ನತೆಯಲ್ಲ, ಅವಿಶ್ರಾಂತ ಪರಾಕ್ರಮಿ ಯೂದ ಮಹಾಪುರುಷನ ಪರಾಭವದ ಸಿರ್ಥರತೆಯ ಸಮ್ಯಗ್ಧೈರ್ಯಭಾವ ಯುಗ ಪುರುಷ ದ್ವಾಪರನು ಪ್ರವೇಶಿಸಿ ಬಿಸುಸುಯ್ಯುವನು; ಸುತ್ತಲೂ ನೋಡುವನು, ಕಂಬನಿಗರೆವನು. ಕಡೆಗೆ ನಿಡುಸುಯ್ದು ತನ್ನಲ್ಲಿ ತಾನೇ ಹೇಳಿಕೊಳ್ಳುವನು.]

ದ್ವಾಪರ—

ಇದೇನಿದೀ ಭಾರತ ಕುರುಕ್ಷೇತ್ರಮಿದಾದಿಸಂ
ಮೂಗುವಟ್ಟಿರ್ಪ ಸುಡುಗಾಡಿಸಂತಿರ್ಪುದು ?
ನಿಚ್ಚವುಂ ನಾನಾಲಿಸಿರ್ದ ರಣಕಹಳೆಗಳ
ದೆಸೆದೆಸೆಗಳಂ ತಿವಿವ ದನಿಯಿಲ್ಲ. ಉರವಣಿಪ
ಬೀರರಟ್ಟಹಾಸದ ಕಾಕುಗಳ ಭೀಷಣ
ಸ್ವನಮಿಲ್ಲ. ಕಡುಗಿ ಕಾದುವ ಭಟರ ಖಡ್ಗಗಳ
ಸಂಘಟ್ಟನಾ ಧ್ವಾನಮಿಲ್ಲ. ಅತಿರಥರ
ಕಲಕಲ ನಿನಾದದಿಂದೊಡಗೂಡಿ ಪೊರಮಡುವ
ಕೋದಂಡಪಾಣಿಗಳ ಸಿಂಜಿನಿಯ ಟಂಕೃತಿಯ
ನಿರ್ಘೋಷಮಿಂದೆತ್ತ ಪೋಗಿಹುದು ? ಕಿಡಿಗರೆವ
ಮಂತ್ರಾಸ್ತ್ರ ಶಸ್ತ್ರಗಳ ರುಕ್ಷ ದೀಧಿತಿಯೆಲ್ಲಿ?
ಮುಗಿಲ್ದೆರೆಯನುಚ್ಚಳಿಸಿ ಎಡೆಬಿಡದೆ ಬಾಂದಳಕೆ
ಚಿಮ್ಮುತಿರ್ದಾ ಸರಲುಗಳ ಸುರಿಮಳೆಯದೆಲ್ಲಿ?
ಗದೆಯ ಗಾಳಿಯೊಳರಿಗಳೆಂಬುವ ತರಗೆಲೆಯ

ಮೊತ್ತಮಂ ಸುತ್ತಿಸಿದ ಭೀಮನ ವಾಣಿಯೆಲ್ಲಿ?
ತನ್ನ ವಾಹಿನಿಯ ವೀರಾಳ್ಗಳಂ ಹುರುಡಿಸಲು
ಹುರಿಗೊಳಿಸಿದಾ ಸರ್ಪಕೇತನನ ಹರಿಕಂಠ-
ಗರ್ಜನೆಯದೆತ್ತಲಿಂದಡಗಿದುದು? ಗಾಂಡೀವ-
ಮೇನಾಯ್ತು? ಕುರುದಳದ ಕೆಚ್ಚೆದೆಯು ಬಿರಿವಂತೆ
ಮೊಳಗಿದಾ ಪಾಂಚಜನ್ಯಮದೆಲ್ಲಿ? ಬಿಂಕದಲಿ
ಕೊಂಕು ಕೊರಲಂಗೈದು ಕೆನೆದಾ ತುರಗತತಿಯ
ಹೇಷಾರವಂಗಳಂ ಇಂದಾವ ನೀರವತೆ
ನುಂಗಿದುದು? ಮೇಗೆತ್ತಿ ಸೊಂಡಿಲ್ಗಳಂ ಮುಂದೆ
ನುಗ್ಗುತಿರ್ದಾ ಕರಿಯ ಬಲ್ಮೆಯ್ಯ ಗಜಗಳೇಂ
ಮುತ್ತುತಿರ್ಪೀ ಕತ್ತಲೆಯ ಕಡಲಿನಲಿ ಕರಗಿ
ಪೋದುವೇಂ?—(ಸ್ವಲ್ಪ ಹೊತ್ತು ಸುತ್ತನೋಡಿ)
ಇಂದನ್ನೆವರೆಗಂ ಕುರುಕ್ಷೇತ್ರಂ
ಅರಸುಗಳ ರಣರಂಗಮಾಗಿತ್ತು; ಕೊಳೆಯುಲಿಹ
ಪೆಣದ ಬಣಬೆಯ ಕಣವದಾಗಿಹುದೀ ಪೊಳ್ತು!
ನಿನ್ನೆಯಿದು ಮೆಯ್ಗಲಿಗಳಾಡುಂಬೊಲಾಗಿತ್ತು;
ಮರುಳ್ಗಳಾಡುತಿಹ ಮಸಣವಾಗಿಹುದಿಂದು!—
ಕಾಳೆಗದ ನೆಲಗಳೆನೆ ಬಿತ್ತರದ ಮಸಣಗಳು!
ಕಾಳೆಗವೊ ಬಿತ್ತರದ ಕೊಲೆಗೆಯ್ಮೆ! ಗೆಲವೆಂದ-
ರೇನು? ಸೋಲ್ವರ ಸಂತಾಪಂ; ವಿಜಯಿಗಳ ಪೆರ್ಮೆ!—

[ಚಿಂತಿಸುವನು; ಕಣ್ಣುಮುಚ್ಚಿ ಕಣ್ದೆರೆದು ಬಿಸುಸುಯ್ದು]

ಎನ್ನಾಳ್ವಿಕೆಯ ತುತ್ತತುದಿಯೊಳೆ ವೀರಾತ್ಮ-
ರೆನಿತಳಿದು ಪೋಗಿಹರು? ಶಿವಶಿವಾ, ಮಸಣಮೆನಗೆ
ಈ ಚರಮ ಸೋಪಾನಮಾದುದೇ? ನೆತ್ತರಲಿ
ಕಾಲ್ದೊಳೆಯುವಂತಾಯ್ತು ತಿರೆಯುಸಗಲುವ ಮುನ್ನಂ!

ಚಲದಂಕಮಲ್ಲರೆನಿತಳಿದಿಪರ್? ಪುಣ್ಯಾತ್ಮ-
ರೆನಿತಳಿದಿಹರ್? ತರುಣರೆನಿತು ಮಡಿದಿಹರ್?
ದ್ವಾಪರ ಯುಗದ ಮಹಾವ್ಯಕ್ತಿಗಳ್: ಆಚಾರ್ಯ
ಭೀಷ್ಮರ್ಂ, ಕರ್ಣಂ, ದ್ರೋಣಂ, ಅಭಿಮನ್ಯು ಮೊದಲಪ್ಪ
ಮಹಾವೀರರನಿಬರುಂ ಸಮರಹುತವಹಸಿಂದ
ಬೇಳ್ದ ಕೆಂಗೂಳಿನೊಲು ಬೂದಿಯಾಗಿರ್ಪರ್.
ಕೌರವ ಮಹಾನುಭಾವಂ ಪಗೆಯ ಕೈತವಕೆ
ಸಿಲ್ಕಿ ತೊಡೆಯೊಡೆದು ತನ್ನ ತಿರೆಗುರುಳಿಹಂ!
ಉಕ್ಕಿವದ ಕಾಳೆಗದಿ ಅಳಿವಾಯ್ತು ಕರ್ಣಂಗ!
ಬಲಿಯಾದನಾ ದ್ರೋಣನ್ ಅರನ ಮಗನಾಡಿದಾ
ಮುಗ್ಧ ಮಿಥ್ಯೆಯಂ ನಂಬಿ!—(ಮೇಲೆ ನೋಡಿ ಭಾವದಿಂದ)

ಇಳಿದು ಬಾ, ಕಳ್ತಲೆಯೆ;

ಬಾನ ಹೊಡೆಯಿಂದಿಳಿದು, ಬಾ ಮುಸುಕು ಮಸಣಮಂ.
ಕುರುಕುಲಾರ್ಕನ ಚರಮ ದುರವಸ್ಥೆಯಂ ಸಹಿಸ-
ಲಾರದೆಯೆ ಪಡುಗಡಲಿಗಿಳಿದ ಬೆಂಗದಿರನೇ
ಮರಳಿ ನೀ ಮೂಡದಿರು! ನಿನ್ನ ಪೊನ್ನೆಳಗಿನಿಂ
ಈ ಭಯಂಕರ ದೃಶ್ಯಮಂ ಮರಳಿ ಬೆಳಗದಿರು!
ಇನ್ನಿದು ಕುರುಕ್ಷೇತ್ರಮಲ್ತು, ಇಳೆಯ ಬಲ್ಮಸಣಂ!

[ತನ್ನ ಸುತ್ತಲೂ ಎಲ್ಲಿ ತೋರದೆ ಹಬ್ಬಿರುವ ಹೆಮ್ಮಸಣವನು ಎವೆಯಿಕ್ಕದೆ ನೋಡುತ್ತ ದ್ವಾಪರನು ಅಂತರ್ಮುಖಿಯಾಗಿ ನಿಲ್ಲುವನು. ಸುಂದರ ಭದ್ರಾಕಾರನಾದ ಕಲಿಪುರುಷನು ಪ್ರವೇಶಿಸಿ ಸುತ್ತಲೂ ದೃಷ್ಟಿಸಿ ನೋಡಿ ದೂರ ನಿಂತ ದ್ವಾಪರದೇವನನ್ನು ಗುರುತಿಸಿ ಮೆಲ್ಲಮೆಲ್ಲನೆ ಅವನ ಬಳಿಸಾರುವನು. ಆತನಿಗೆ ತುಸುಬಳಿಯಲ್ಲಿ ನಿಂತು ಸ್ವಲ್ಪ ಹೊತ್ತು ನಿರೀಕ್ಷಿಸುವನು. ದ್ವಾಪರನು ಯಾವುದೋ ವಿಚಾರದಲ್ಲಿ ತಲ್ಲೀನನಾಗಿ ಬಹಿಃಪ್ರಪಂಚವನ್ನೇ ಮರೆತು ಬಿಟ್ಟಿರುವನೆಂದು ತಿಳಿದು ಗಂಭೀರವಾಗಿ ಆತನನ್ನು ಕುರಿತು ಸಂಬೋಧಿಸುವನು.]

ಕಲಿ— ದ್ವಾಪರದೇವ!

ದ್ವಾಪರ—(ಅನನ್ಯಚಿತ್ತನಾಗಿ ತನ್ನೊಳುತಾನೇ)

ಏಂ ರೌದ್ರಮೋಂ ಕ್ರೂರಮೋಂ ದುಃಖಮಯ ದೃಶ್ಯಂ!
ದಿಟ್ಟಿಪರಿವನ್ನೆವರಂ ಎತ್ತನೋಡಿದಡತ್ತ
ನಾಶಮೇ ನಗುತಿಹುದು ವಿಕಟಾಟ್ಟಹಾಸದಿಂ!
ಕಣ್ಣಿಡುವ ಕಡೆ ಮುರಿದ ಪೊಂದೇರುಗಳ ರಾಶಿ;
ಎತ್ತನೋಡಿದಡತ್ತ ಸತ್ತಾನೆಗಳ ಮೊತ್ತಂ;
ರುಂಡಗಳ ಚೆಂಡಾಡುತಿಹ ಮರುಳ್ಗಳ ಬಳಗಂ;
ಬೆನ್ನ ಜೀವಂ ಸಿಗಿವ ಸೃಗಾಲಗಳ ಗುಂಪು!—
ಎನ್ನ ಯುಗದಂತ್ಯದೊಳೆ ಪ್ರಲಯಮಾದಂತಿಹುದು!

[ಚಿಂತಾಮಗ್ನನಾಗಿ ನಿಲ್ಲುವನು.]

ಕಲಿ— ಆವುದೋ ಎದೆಬಿರಿವ ಚಿಂತೆಯೊಳ್ ಮುಳುಗಿಹನ್.
ಕರೆದರೂ ಎನ್ನ ದನಿ ಕೇಳಿಸದು. ದ್ವಾಪರಂ
ಇಂತು ಚಿಂತಾಕ್ರಾಂತನಾಗಿ ವ್ಯೆಮರೆತುದಂ
ನಾನಾವಗಂ ಕಂಡುದಿಲ್ಲಂ—ದ್ವಾಪರದೇವ!

ದ್ವಾಪರ—(ಎರಡು ಹೆಜ್ಜೆ ಮುಂದೆ ನಡೆದು ತನ್ನೊಳುತಾನೇ)

ಏನಿದೀ ಸದ್ದುಗಳು? ಆರ್ತನಾದಗಳೇನು?
ಮೌನಮೇ ನೋವಿನಿಂದೊಯ್ಯೊಯ್ಯನಳುವಂತೆ
ತೋರುತಿದೆ. ಕವಿದಿರ್ಪ ನಟ್ಟಿರುಳೆ ಬಿಸುಸುಯ್ದು
ನರಳುವಂತಿರ್ಪುದು. ಕೈಮುರಿದ ಕಾಲ್ಮುರಿದ
ಹೊಡೆಯೊಡೆದ ತಲೆಸಿಡಿದ ನೂರಾರು ಸೈನಿಕರ
ಅಸ್ಪಷ್ಟ ವಾಣಿಗಳ ತುಮುಲ ರೋದನಂ
ಜವನೆದೆಯ ಬೆದರಿಪಂತೆ ಬಾನ್ಗೇರುತಿಹುದು.—
ಹಾ ಕೌರವೇಂದ್ರ! ಹಾ ಭೀಷ್ಮ! ಹಾ ದ್ರೋಣ!
ಹಾ ದಿವಾಕರತನಯ! (ಆಲೋಚಿಸುತ್ತ ನಿಲ್ಲುವನು)

ಕಲಿ— (ಗಟ್ಟಿಯಾಗಿ) ದ್ವಾಪರದೇವ!

ದ್ವಾಪರ—(ತಿರುಗಿ ನೋಡಿ, ನಿಂತಲ್ಲಿಂದ ಅಲುಗದೆ ಗಂಭೀರವಾಗಿ)
ಕಲಿ ಮಹಾಶಯ!

ಕಲಿ— ಏನಿದಿಂತೊರ್ವನೇ
ನಿಂತು ಚಿಂತಾಮಗ್ನನಾಗಿರ್ಪೆ? ಕರೆದೊಡಂ
ಕೇಳಿಸದು. ಆವ ಮೆಯ್ಯುಲಿಯೊಡನೆ ನುಡಿಯುತಿಹೆ?

ದ್ವಾಪರ—(ಉಕ್ಕಿಬರುವ ದುಃಖವನ್ನು ತಡೆದು ನೀಳ್ದನಿಯಿಂದ)
ಕಲಿದೇವ, ದ್ವಾಪರಂ ಕಲಿಯನೀ ಮಸಣದಲಿ
ಎದುರುಗೊಳ್ವಂತಾಯ್ತೆ? ಮುಂದೆ ಬಹ ಯುಗಪುರುಷ-
ನಾಗಲಿಹ ನಿನಗೆ ಈ ಸತ್ತ ಸುಡುಗಾಡಿನಲಿ
ಪಟ್ಟಾಭಿಷೇಕಮಪ್ಪಂತುಟಾಯ್ತೆ? ಎನಿತೆನಿತೊ
ಬರಿಸಗಳ ಗೆಯ್ಮೆಯಿಂ ಗಳಿಸಿರ್ದ ಸಂಸ್ಕೃತಿಯ
ಚೆಲ್ವಿಕೆಯು ತುತ್ತತುದಿಯಲಿ ಪುಚ್ಚಳಿದು ಪೋಯ್ತೆ?
ನಿನಗೆನ್ನ ಕಾಲಸಾಮ್ರಾಜ್ಯಮಂ ಮರಳೀವ
ಸಮಯದಲಿ, ಆವ ಪೆರ್ಮೆಯೊಳಾವ ಮೆಚ್ಚುಗೆಯ
ವಸ್ತುವಂ ಎನ್ನ ಕೃತಿ ಎಂದಾನು ತೋರಿಸಲಿ?
ಈ ಮಹಾಕುರುಕ್ಷೇತ್ರ ಶ್ಮಶಾನಮಂ ತೋರಲೇ?
ಅಳಿದ ತುಳಿಲಾಳ್ಗಳ ಶವಂಗಳಂ ನಿನಗಿತ್ತಪೆನೆ?
ಮುರಿದ ಹೊಂದೇರುಗಳ ಮಂದೆಯಂ ತೋರ್ಪಪೆನೆ?
ನಿನಗಾವ ಮಂಗಳದ ಸಿರಿಯನೀಯಲಿ? ಹೇಳು!

ಕಲಿ— ದ್ವಾಪರದೇವ, ನೀನಿಂತೇಕೆ ಉಮ್ಮಳಂ-
ಬಡುತಿರ್ಪೆ? ಶಾಂತನಾಗಯ್. ನೀನಿತ್ತುದಂ
ಸಂತಸದಿ ಕೈಕೊಂಡು ಎನ್ನುಜ್ಜುಗಂಗೈವೆನ್.
ನಿನ್ನೊಳೂಣೆಯಮೇಂ? ವ್ಯಕ್ತ ಸೃಷ್ಟಿಯನೆಲ್ಲ
ತನ್ನೊಡಲಿನೊಳ್ ಪೊತ್ತು ಸಲಹಿದಾ ನಿತ್ಯತೆಯು

ಮುರಳಿಯುದಂ ಅವ್ಯಕ್ತಮುಸ್ಸಾಗಿ ಮಾಡೆ
ಯುಗಪುರುಷನಾದ ನೀನದಕೇಕೆ ದುಮ್ಮಾನ-
ಗೊಳ್ಳುತಿಹೆ. ರಸಪೂರ್ಣ ಶೂನ್ಯದಿಂದೊಗೆತಂದು-
ದೀ ವಿಶ್ವಂ; ಅದರೊಳೆ ವಿಲೀನವಾಗಡಗುವುದು.
ಆದೊಡೇಂ? ಮುರಳಿ ಬೇರೊಂದಾಕೃತಿಯು ತಳೆದು,
ಬೇರೊಂದು ಕಟ್ಟಳೆಗೆ ತಲೆಬಾಗಿ, ಬೇರೊಂದು
ಕಾಲದಲಿ ಮೂಡುವುದು. ಲೀಲೆಯೆಂಬುವುದೆಲ್ಲ
ಮೂಡುವುದು ಮುಳುಗುವುದರಲ್ಲಿಹುದು. ಅದಕೇಕೆ
ಮರುಗುವುದು? ಕನಸಿನಲಿ ಕಂಡ ಕಡವರಮಳಿಯೆ
ಎಚ್ಚೆತ್ತು ಶೋಕಿಪುದುಚಿತಮಲ್ತು.

ದ್ವಾಪರ—(ಬಿಸುಸುಯ್ದು, ಕಲಿಯ ಹತ್ತಿರ ಹೋಗಿ ಹೆಗಲಮೇಲೆ ಕೈಯಿಟ್ಟು)
ಕಲಿದೇವ,
ಇಂದಳಿದುದನಿತುಮುಂ ಮುಂದೆ ಐತಂದಪುದೆ?

ಕಲಿ— ಅಹುದು, ಸಂದೆಯವಿಲ್ಲ.

ದ್ವಾಪರ—(ಸುತ್ತಲೂ ಕೈನೀಡಿ ತಿರುಗಿಸಿ ರಣರಂಗದಲ್ಲಿ ಕೆಡೆದ ವೀರರೆಲ್ಲರನು ನಿರ್ದೇಶಿಸಿ) ಈ ಬೀರರನಿಬರುಂ?

ಕಲಿ— ಈ ಬೀರರನಿಬರುಂ!

ದ್ವಾಪರ— ಬಾಂದೊರೆಯ ಕಂದನಹ
ಭೀಷ್ಮನಂತಹ ಬ್ರಹ್ಮಚಾರಿಗಳು?

ಕಲಿ— (ಒಂದು ವಿಧವಾದ ಮೊಂಡ ಕೆಚ್ಚಿನಿಂದ) ಭೀಷ್ಮನಂ
ಮೀರಿದಪರ್ಪೈತಹರ್!

ದ್ವಾಪರ— ಭೀಷ್ಮನೊಲು ಸೂರುಳಂ
ತಪ್ಪದಿಹ ಪಾರ್ಥಿವರು?

ಕಲಿ— ಅದಕೆರಡು ಮಡಿಯುಹರ್
ಜನಿಸುವರ್.

ದ್ವಾಪರ— ದ್ರೋಣನೊಲು ಬಿಲ್ಲೋಜರ್ಕ್ಕೈತಹರೆ ?

ಕಲಿ— (ತಿರಸ್ಕಾರದಿಂದಲೂ ಹೆಮ್ಮೆಯಿಂದಲೂ)

ಕರ್ಬೊಗೆಯ ಕಾರುವ ಸಿಡಿಲ್ಗಳನೆ ನಿರ್ಮಿಪರ್ !

ಗ್ರಹ ಚಂದ್ರ ತಾರೆಗಳನಳೆಯುವರ್ ; ತೂಗುವರ್ !

ದ್ವಾಪರ—ಕರ್ಣನಂತಹ ದಾನಿಗಳು ಬಹರೆ?

ಕಲಿ— ಬರದಿರರ್ !

ದ್ವಾಪರ—ಬಿಂಕದಲ್ಲಿ, ಚಲದಲ್ಲಿ, ಕಡುದಿಟ್ಟತನದಲ್ಲಿ,

ಬಳಲದಿರ್ಪದಟಿನಲಿ, ಪೆಂಪಿನಲಿ, ಪೆರ್ಮೆಯಲಿ,

ಒಲ್ಮೆಯಲಿ, ನೇಹದಲಿ, ಪರಮ ಗಾಂಭೀರ್ಯದಲಿ

ಕೌರವಂಗೆಣೆಯಹ ಮಹಾನುಭಾವರು ಬಹರೆ?

ಕಲಿ— ಅಹುದು, ಅದಕೆ ಸಂದೇಹವೇಕೆ?

ದ್ವಾಪ — (ಸಂತೋಷದಿಂದ) ಧನ್ಯನ್ !

ಅವರನಾಳುವ ಪುಣ್ಯವಿಹ ನೀನೆ ಧನ್ಯನ್ !

ಆದೊಡಂ, ಕಲಿದೇವ, ನಿನ್ನ ಯುಗದಾಳುಗಳು

ಕುಬ್ಜರೆಂಬುದು ಶಾಸ್ತ್ರಸಿದ್ಧವಾಗಿರ್ಪುದೈಸೆ?

ಕಲಿ— (ಬಿಂಕದಿಂದ) ಕುಬ್ಜರಾದೊಡವೇಂ? ದೀರ್ಘದೇಹಿಗಳಪ್ಪ

ತಮ್ಮ ಪೂರ್ವಿಕರ ಭುಜವನಡರುವರೈಸೆ?

ಅದರಿಂದೆ ಪೂರ್ವ ಯುಗಗಳ ನರರಿಗಿಂತಲುಂ

ಉನ್ನತರ್ ; ಬಿತ್ತರದ ದಿಟ್ಟಿಯುಂ ಪಡೆದವರ್ !

ಚಳಿವೆಟ್ಟಿಗಿಂತಲುಂ ಅದರ ನೆತ್ತಿಯೊಳಿರ್ಪ

ಧವಳಗಿರಿ ಶೃಂಗಮೇ ಪಿರಿದಪ್ಪುದೈಸೆ?—

ಸಾಪಿನಲಿ ಹೊಸ ಬಾಳು ಹುದುಗಿಹುದು ; ನಾಶದಲಿ

ನವಸೃಷ್ಟಿ ಪವಡಿಸಿದೆ. ನೂರು ಮಾತಿಂದೇಂ?

ಸಾವೆ ಹೊಸ ಬಾಳಿಗಾಧಾರವಾಗಿರ್ಪುದು ;

ನಾಶವೇ ನವಸೃಷ್ಟಿಗುತ್ಸಾಹವಾದಪುದು !

ದ್ವಾಪರ— ಯುಗಗಳೊಳ್ ಕಲಿಯುಗವೆ ಶ್ರೇಷ್ಠವೆಂದೆಂಬೆಯೇಂ?

ಕಲಿ— ಶ್ರೇಷ್ಠಮುಪ್ಪುದೊ ಅಲ್ತೊ ಆದಂ ನಾನೀಗೊರೆಯೆ
ಉನ್ನತೋನ್ನತಮೆಂದು ಕೆಚ್ಚಿನಿಂ ನೆಚ್ಚಿಹೆನ್.
ಪೂರ್ವ ಯುಗದನುಭವದ ತಳಹದಿಯ ಮೇಲೆಯೇ
ಬರುವ ಕಾಲದ ಭವ್ಯ ಮಂದಿರವ ನಿರ್ಮಿಪೆನ್.

ದ್ವಾಪರ—(ಹರ್ಷದಿಂದ)

ನವಯುಗದ ನವಚಕ್ರವರ್ತಿ, ಕಲಿದೇವ,
ನಿನಗೆ ಮಂಗಳಮಕ್ಕೆ! ಇಂದಿಗೆನ್ನಾಳ್ವಿಕೆಯು
ತುದಿಯನೈದಿರ್ಪುದು—ನಾನಿನ್ನು ತೆರಳ್ದಪೆಂ
ಕೌರವೇಂದ್ರಂ ಕಡೆಯುಸಿರನೆಳೆವ ಮುನ್ನಮೇ—
ನಾನಾತನಂ ಕಂಡು ಮಾತಾಡಬೇಕೆಂಬ
ನಿಡುಬಯಕೆಯಿದೆ. ಎನ್ನ ಯುಗದೊಳಾತನೆ ನರಂ
ತನ್ನ ಛಲದಿಂ, ತನ್ನ ಶಕ್ತಿಯಿಂ, ತನ್ನತುಳ
ದೃಢತೆಯಿಂದೆಂತುಟು ಮಹಾಸತ್ವನಹನೆಂಬ
ತತ್ತ್ವಮಂ ತಿರೆಗೆಲ್ಲ ತೋರಿಹಂ—ನಿನಗಿದೋ
ಎನ್ನೀ ಕಿರೀಟಮಂ ನೀಡುವೆನ್. (ಕಿರೀಟವನು ತೊಡಿಸಿ)
ಮೇಣಿದೋ
ರಾಜಕರವಾಲಮಿದೆ! (ಕೊಡುವನು)

ಕಲಿ— (ನಮ್ರನಾಗಿ ಸ್ವೀಕರಿಸಿ) ಅಗ್ರಜನೆ, ನಿನಗಿದೋ
ನಮಿಸುವೆಂ. ನಿನ್ನ ಅನುಭವಮೆನಗೆ ಬಟ್ಟೆದೋರಲಿ!

[ಇಬ್ಬರೂ ಒಬ್ಬರೊಬ್ಬರನ್ನು ಪ್ರಶಂಸನೀಯ ದೃಷ್ಟಿಯಿಂದ ನೋಡುವರು. ಕಣ್ಣೀರು ತುಂಬಿ ಆಲಿಂಗಿಸುವರು. ತರುವಾಯ ದ್ವಾಪರನು ಸುತ್ತಲೂ ತಿರುಗಿ ಶ್ಮಶಾನವನ್ನು ನೋಡಿ ನಿಟ್ಟುಸಿರು ಬಿಟ್ಟು ಎರಡು ಹೆಜ್ಜೆ ಹಿಂಜರಿಯುವನು. ಕಲಿಯು ದ್ವಾಪರನನ್ನೇ ನೋಡುತ್ತ ಬೆರಗಾಗುವನು.]

ಕಲಿ— ಅಣ್ಣಾ, ಏನನಿಟ್ಟಿಸುತಿರ್ಪೆ? ಏಕೆ ಬಿಸುಸುಯ್ಯುತಿಹೆ?

ದ್ವಾಪರ—(ಹೋದ ದೃಷ್ಟಿಯನ್ನು ತಿರುಗಿಸದೆ ಮರುಕದಿಂದ)
ನೋಡಲ್ಲಿ, ಕಲಿದೇವ?

ಕಲಿ— (ನೋಡಿ) ಏನಿದೀ ಬೆಳಕುಗಳು? ಕತ್ತಲೆಯೆ ನೂರಾರು
ಸೊಡರ್ಗಳಂ ತೆಕ್ಕನೆ ಬೆಸಲೆಯಾದಂದದಲಿ
ಕಣ್ದಿಟ್ಟಿಪರಿವನ್ನೆವರಂ ಎತ್ತಲುಂ ಚಲಿಪ
ಪೊಂಜುಗಳ ಬಲ್ಬಳಗಂ ರಂಜಿಸಿರ್ಪುದು!

ದ್ವಾಪರ—ನೋಡಯ್, ಮತ್ತೇನಂ ಕಾಂಬೆ, ನೋಡಯ್.

ಕಲಿ— (ವಿಸ್ಮಿತನಾಗಿ) ಏನಿದೀ ರೂಪಗಳು? ಕೆಂಜೊಡರ್ಗಳ ಮಬ್ಬು
ಬೆಳಕಿನಲಿ ಮಸುಕು ಮಸುಕಾಗಿರ್ಪ ಮಾನವರ
ನೂರಾರು ಛಾಯೆಗಳು ಮೆಲ್ಲನೆ ಚರಿಸುತಿಹವು.

ದ್ವಾಪರ—(ದುಃಖದಿಂದ)
ಅರಿಯೆಯೇಂ, ಕಲಿದೇವ, ಅರಿಯೆಯೇಂ? ಪಾಂಡವರ
ಕೌರವರ ಪಕ್ಷದಲಿ ಕಾದಾಡಿ ಮಡಿದವರ
ಅಕ್ಕರೆಯ ಬಂಧುಗಳು ತಮ್ಮವರ ಪೆಣಂಗಳಂ
ಪುಡುಕುತ್ತೆ ದೇಹವಿಹ ಪ್ರೇತಗಳ ತೆರದಿಂದೆ
ಬಿಸುಸುಯ್ದು ಕಂಬನಿಯ ಸೂಸಿ ಅಲೆಯುತಿಹರು!

ಕಲಿ— ಜನನ ಮರಣದ ದುಃಖಗಳು ಹಿಂಡುಗೊಂಡು
ಮಸಣದಲಿ ಮೆರವಣಿಗೆ ಮಾಳ್ಪಂತೆ ತೋರ್ದಪುದು!

ದ್ವಾಪರ—ಇದೆ ಪರಾಕ್ರಮಶಾಲಿಗಳ ರಣೋತ್ಸಾಹಕ್ಕೆ
ಪ್ರತಿಫಲಂ! ನೋಡಿದೆ ರಣೋನ್ಮತ್ತರಾಗಿರ್ದ
ಮೊಯ್ಗಲಿಗಳದಟಿನಿಂದುದಿಸಿರ್ಪ ಮಸಣಂ!
ಮೇಣಿದೆ ಮಹಾಭಾರತದ ಕುರುಕ್ಷೇತ್ರದಿಂ,
ವೀರ ಸಂಗ್ರಾಮದಿಂ, ಲೋಕಪ್ರಸಿದ್ಧವಹ
ವಿಜಯದಿಂ ಮೂಡಿ ಬಂದಿಹ ಸೂಡುಗಳ ಬೀಡು!
ಶವಗಳುಗ್ರಾಣಂ! ನಿಶಾಚರಿಗಳಿಗೆ ನಾಡು!

[ಇಬ್ಬರೂ ನೋಡುತ್ತ, ನೋಡುತ್ತ, ದೂರವಾಗಿ ಕತ್ತಲಲಿ
ಕರಗಿಹೋಗುವರು.]

---

# ದೃಶ್ಯ ೨

[ಶ್ಮಶಾನ ಕುರುಕ್ಷೇತ್ರದ ಮತ್ತೊಂದು ಭಾಗ. ದೂರ ಕತ್ತಲೆಯ ಅಂತರಾಳದಲ್ಲಿ ಪೊಂಜುಗಳ ಓಡಾಟವೂ, ಸ್ವಲ್ಪಸ್ಪಷ್ಟ ಮನುಷ್ಯಾಕೃತಿಗಳ ಚಲನೆಯೂ ಕಾಣಿಸುವುವು. ಆ ವ್ಯಕ್ತಿಗಳು ಬರಬರುತ್ತ ಸಮೀಪವಾಗುವುವು. ಗೀರ್ವಾಣ, ನೀಲಾಕ್ಷ, ಚಾಣೂರರೆಂಬ ಮೂರು ಜನ ಕಿಂಕರರು ಪೊಂಜಿನ ಬೆಳಕಿನಲ್ಲಿ ಅತ್ತಿತ್ತ ತಿರುಗುತ್ತ, ಬಗ್ಗಿ ಬಗ್ಗಿ ನೋಡುತ್ತ ಹುಡುಕುತ್ತ ಬರುವರು. ಒಂದೊಂದು ಸಲ ತೇರುಗಳು ಮುರಿದು ಬಿದ್ದ ಸ್ಥಳಗಳನ್ನು ಬಗ್ಗಿ ಇಣಿಕಿನೋಡಿ ಪರೀಕ್ಷಿಸುವರು. ಒಂದೊಂದು ಸಲ ಹೆಣದ ಮೇಲೆ ಬಿದ್ದ ಹೆಣಗಳನ್ನು ನೂಕಿ ನೂಕಿ ನೋಡುವರು. ಒಂದೊಂದು ಸಲ ಕಿತ್ತಿಹೋದ ಮುಖಮಂಡಲಗಳನ್ನು ಪರೀಕ್ಷಿಸುವರು. ಆವರು ಕೌರವೇಂದ್ರನನ್ನು ಹುಡುಕಿಕೊಂಡುಬಂದ ಚಾರರು. ತಮ್ಮ ಸ್ವಾಮಿಯ ಪರಾಭವವನ್ನು ಕೇಳಿ ಆತನಿರುವ ತಾಣವನ್ನು ಕಂಡುಹಿಡಿದು ಸೇವೆಮಾಡಲು ಆತುರರಾಗಿ ಬಂದಿದ್ದಾರೆ]

ಗೀರ್ವಾಣ—(ಪೊಂಜನ್ನು ಸ್ವಲ್ಪ ಮೇಲೆತ್ತಿ) ಎಚ್ಚರಿಕೆ, ಎಚ್ಚರಿಕೆ ಚಾಣೂರ. ಕತ್ತಲಲಿ ಮುಂಚಿ ಮುಂದೆ ನಡೆಯದಿರು. ನೆತ್ತರುಗೆಸರಿನಲಿ ನಿಮಿರಿ ನಿಂತ ಕೋಲ್ಬುದಿಗಳಡಗಿಹವು. (ಚಾಣೂರನು ನಿಲ್ಲುವನು.)

ನೀಲಾಕ್ಷ—ಗೀರ್ವಾಣ, ದೀವಿಗೆಯನಿತ್ತ ಹಿಡಿ. ಮಣಿಮುಕುಟ ಮಸ್ತಕದ ಕಲಿಯೊರ್ವನಿಲ್ಲಿ ಪಟ್ಟಿಹನು. ಆಕೃತಿಯೊಳೆಮ್ಮೊಡೆಯನನೆ ಹೋಲುವನು. (ಚಾಣೂರನು ಓಡಿಬಂದು)

ಚಾಣೂರ—ಎಲ್ಲಿ? ಎಲ್ಲಿ? (ಮೂವರು ಪೊಂಜಿನ ಬೆಳಕಿನಲ್ಲಿ ಬಗ್ಗಿ ನೋಡುವರು.)

ಗೀರ್ವಾಣ—ನೀಲಾಕ್ಷ, ನಿನಗೇಂ ಹುಚ್ಚು ಹಿಡಿದಿದೆಯೆ? ಕಂಡ ಕಂಡ ಹೆಣನೆಲ್ಲಮಂ ಎಮ್ಮೊಡೆಯನೆಂದೊದರುತಿಹೆ!

ಚಾಣೂರ—ಕರಡಿಯಂ ಕಂಡಳುಕಿದಾತಂಗೆ ಕಗ್ಗಲ್ಲೆ ಕರಡಿಯಹುದಂತೆ. ಅಂತೆ ನೀಲಾಕ್ಷಂಗನಿಬರುಂ ಕುರುಚಕ್ರವರ್ತಿಯಂತೆ ತೋರುವರು.

ನೀಲಾಕ್ಷ—(ದುಃಖದಿಂದ ನಿಡುಸುಯ್ದು) ಅಯ್ಯೋ, ಕೌರವ ಕುಲೇಂದ್ರನಂ ನೋಡುವಾಸೆ ನನಗೆ ಮರುಳಮರಿದಂತಿಹುದು. (ಕಣ್ಣೀರ್ಮಿಡಿದು) ಈ ಹೆಣದ ಬಣಬೆಗಳೊಳು ಕುರುಪತಿಯನೆಂತು ಹುಡುಕುವುದೊ ನಾನರಿಯೆ. ಶವಗಳಂ ತುಳಿತುಳಿದು ಪೆಣದಿನಿಗಳಾಗುತಿಹೆವು.

ಚಾಣೂರ—ಬಾಣದ ಮೊನೆಗಳಂ ಮೆಟ್ಟಿ ಮೆಟ್ಟಿ ನನ್ನಡಿಗಳೆರಡೂ ಜಜ್ಜರಿತವಾಗಿಹವು. ಇದೇನು ರಣರಂಗವೋ! ಪಾಳ್ಗೊಲೆಯ ನೆಲೆ!

ನೀಲಾಕ್ಷ—ಇನ್ನೆಗಂ ಸಮರರಂಗಂ ಇನಿತು ಭಯಂಕರಮೆಂದು ನಾನರಿದುದಿಲ್ಲ. ಸಮರಸಮಯಕಿಂತಲೂ ಸಮರೋಪಸಂಹಾರದೀ ಮಸಣಮೆ ಮಿಗಿಲಗುರ್ವವಡೆದಿಹುದಲ್ತೆ?

ಗೀರ್ವಾಣ—ಕಾಳಗದಿಂತೈತಹ ನಾಶದಗುಂದಲೆಯಂ ನಾನಿಂದು ಮಸಗಂಡೆ. ಕಟ್ಟಕಡೆಗಿಂತುಟಾಗುವುದೆಂದು ಮೊದಲಂದು ತಿಳಿದರಾರು?

ಚಾಣೂರ—ಸಮರ ಕಲಾಕೋವಿದರೆಂದು ಪೆಸರಾಂತ ಮೆಯ್ಗಲಿಗಳಂ ತುಳಿಲಾಳ್ಗಳಂ ಬಿಲ್ಲೋಜರಂ ಇಚ್ಛಾಮರಣಿಗಳಂ ಚಿರಂಜೀವಿಗಳಂ ತನ್ನ ದಳದೊಳೆ ಪಡೆದ ಎಮ್ಮೊಡೆಯಂಗೆ ಸೋಲಪ್ಪುದೆಂದಾರು ಬಗೆದಿರ್ದರು?

ನೀಲಾಕ್ಷ—ಆರೇನಂ ಮಾಳ್ಪರು ಬಿದಿಯುಡ್ಡಬರ್ಪಾಗ?

ಚಾಣೂರ—ಮುಂದೆ ನಡೆ, ಗೀರ್ವಾಣ. ನಮ್ಮೊಡೆಯಂಗೆ ಕಟ್ಟಕಡೆಯ ಸೇವೆಯನಾದರುಂ ಗೈದು ಸ್ಯೆಪಂಪಡೆವಂ.

ಗೀರ್ವಾಣ—ನಮ್ಮೊಡೆಯನನ್ನರೊಳು ಮತ್ತಾವ ದಾತಾರನಂ ಇನ್ನಿಳೆಯಮೇಲಾವು ಕಾಣುವೆವು? ದಯೆಯೊಳಾತಂಗೆ ದೊರೆಯಪ್ಪರಾರಿಹರು? ಡಿಂಗರಿಗರ್ಗೆ ಆತನೊಲು ಕಡುನೇಹಮಂ ತೋರ್ಪ ಚಕ್ರವರ್ತಿಗಳಾರು ಈ ತಿರೆಯೊಳಿರ್ಪರು?

ನೀಲಾಕ್ಷ—ನಮಗಾತನೇ ತಂದೆಯಾಗಿರ್ದಂ. ಆತನಳಿದ ಬಳಿಕ್ಕ ನಾಮೆಲ್ಲರುಂ ತಿರಿದುಂಬ ದೇಸಿಗರಲ್ತೆ?

ಚಾಣೂರ—ಹಾ ತಂದೆ, ಎಲ್ಲಿ ನರಳುತ್ತ ಪುಡಿಯೊಳು ಪವಡಿಸಿ ಪೊರಳುತಿಹೆ!—ಗೀರ್ವಾಣ, ನಮ್ಮೊಡೆಯನೆದೆಯರಿವ ಸಲ್ಗತೆಯೊಂದಂ ನಿಮಗೊರೆವೆಂ; ಆಲಿಸಿಂ. ಒರ್ದಿನಂ ನಟ್ಟಿರುಳು. ನಾನು ರುಜೆಯಿಂ ನೊಂದು ಸರಳಿ ಸೆಜ್ಜೆಯೊಳು ಪವಡಿಸಿರ್ದೆ. ನನ್ನಾಕೆ ನನ್ನ ಪೊರೆಯೊಳೆ ಕುಳಿತು ಕಂಬನಿಗಳಂ ಸೂಸುತ್ತಲಿರ್ದಳು. ನನಗೆ ಕಡೆಗಾಲಂ ಬಳಿಸಾರಿ ಬಂದಿತ್ತು. ಆ ಪೊಳ್ತಿನೊಳೆಮ್ಮ ಬೀಡಾರದ ಬಾಗಿಲಂ ಆರೊ ತಳ್ಳಿದವೊಲಾಯ್ತು. ನನ್ನಾಕೆ "ಯಾರವರು?" ಎಂದು ಕುಳಿತಲ್ಲಿಯೆ ಕೂಗಿದಳು. ಆಗ ಕರುಣೆಯಿಂ ತುಂಬಿ ತುಳುಕುವ ಕೊರಲದೊಂದು "ನಾನು ಬಂದಿಹೆನು, ಚಾಣೂರ, ಬಾಗಿಲಂ ತೆರೆ." ಎಂದಿತು. ತೆರೆಯೆ, ಚರರೊಬ್ಬರಿಲ್ಲದೆಯೆ ಒಂಟಿಗನಾಗಿ ಮೈಮುರೆಸಿಕೊಂಡು ಬಂದ ಕೌರವಸ್ವಾಮಿಯುಂ ಕಂಡೆ. ನನಗೆ ಪರಮಾತ್ಮನಂ ದರ್ಶಿಸಿದ ಭಕ್ತನಂತೆ ಸಂತಸಂ ಮಿಗಿಲಾಗಿ ರುಜೆಯುಡಗಿದುದು! ಕುರುಕುಲ ಸಾರ್ವಭೌಮನೆಲ್ಲಿ? ನಾನೆಲ್ಲಿ? ಆತನೆಮ್ಮ ಇಷ್ಟದೈವಮೆ ದಿಟಂ!

ನೀಲಾಕ್ಷ—ಸೋತೊಡೇಂ? ಗೆದ್ದೊಡೇಂ? ಎದ್ದಡೇಂ? ಬಿದ್ದಡೇಂ! ನರಕದೊಳಿರ್ದೊಡೇಂ? ಸಗ್ಗದೊಳಿರ್ದೊಡೇಂ? ನಮ್ಮೊಡೆಯನಾವಗಂ ನಮ್ಮೊಲ್ಮೆಯೊಡೆಯನೈಸೆ!

ಗೀರ್ವಾಣ—ಅವನ ಮತಿ ನಮಗೆ ಮತಿ; ಅವನ ಗತಿ ನಮಗೆ ಗತಿ. ಬನ್ನಿ, ತಂದೆಯಂ ಹುಡುಕುವಂ!

[ಕಿಂಕರರು ಹುಡುಕುತ್ತ ಹೋಗಿ ಕತ್ತಲಲ್ಲಿ ದೂರಾಗುವರು. ಮಾತೆಯೊಬ್ಬಳು ತನ್ನ ಕಂದನನ್ನು ಕೂಡಿಕೊಂಡು ರೋದಿಸುತ್ತ ಬರುವಳು.

ಆಕೆಯ ಗಂಡನು ಮಡಿದ ಪಾಂಡವ ಪಕ್ಷದವರಲ್ಲಿ ಒಬ್ಬ ಕಾಲಾಳು. ಆ ರಾತ್ರಿ ಪತಿಯ ದೇಹವನ್ನು ಹುಡುಕಲು ಶ್ಮಶಾನ ಕುರುಕ್ಷೇತ್ರಕ್ಕೆ ಬರುವಳು.]

ಕಂದ— ಅಮ್ಮಾ, ಕತ್ತಲೆಯೊಳೆಲ್ಲಿಗೆ ಹೋಗುತಿಹೆ?

ಮಾತೆ— ಮಗೂ, ತಿರೆಗೆ ನಿನ್ನಂ ಪಡೆದವನ ರುದ್ರಭೂಮಿಗೆ.

ಕಂದ— ಎಷ್ಟು ದೂರ? ಅದು ಇರುವುದೆಲ್ಲಿ?

ಮಾತೆ— ಅದನೆ ಹುಡುಕುತಿಹೆನು, ಕಂದಾ. (ಬಗ್ಗಿ ಒಂದು ಹೆಣವನ್ನು ನೋಡುವಳು. ಕಂದನೂ ಹೋಗಿ ನೋಡಿ)

ಕಂದ— ಅಮ್ಮಾ, ಯಾರಿವನು?

ಮಾತೆ— ಯಾವನೋ ನಿನ್ನಂತಹ ಮುದ್ದು ಕಂದನಂ ಪಡೆದಿರುವ ತಂದೆಯಿತನು, ಮಗುವೇ.

ಕಂದ— ಇಲ್ಲೇಕೆ ಮಲಗಿಹನು? ಇವನಿಗೆ ಮನೆಯಿಲ್ಲವೇ? ದೇಸಿಗನೆ?

ಮಾತೆ— (ಸ್ವಗತ) ಬಾಳು ಏನೆಂಬುದಂ ಅರಿಯದಿರುವ ಈ ಕೂಸಿಗೆ ಸಾವಿನ ಪರಿಚಯಮಂ ನಾನೆಂತು ಮಾಡಿಕೊಡಲಿ! (ಮಗುಗೆ) ಕಂದಾ, ಕಾಳೆಗದ ನೆಲದೊಳೆ ವೀರರಿಗೆ ಬೀಡಿಲ್ಲ ಎಂದು ಹೇಳುವುದೆಂತು? ಸತ್ತವರ ಸಂಗದಲಿ, ಸತ್ತವರ ನೇಹದಲಿ ಬಾಳುತಿರುವ ಈತನನು ದೇಸಿಗನೆಂದು ಕರೆವುದೆಂತು? ಸಮರವಿಲಯಾಗ್ನಿಗೆ ಬಾಳನು ಬೇಳಿದಿವನು ಜವನಿದ್ದೆಯಲ್ಲಿಹನು. ಮರಳಿ ಎಚ್ಚರನು!

ಕಂದ— ಮರಳಿ ಮೇಲೇಳನೇ?

ಮಾತೆ— ಮೇಲೇಳನು!

ಕಂದ— ಮರಳಿ ಮಾತಾಡನೇ?

ಮಾತೆ— ಇಲ್ಲ!

ಕಂದ— ನನ್ನಂತೆ ಇವನಿಗೊಬ್ಬ ಕಂದನಿಹನೆಂದು ಹೇಳಿದೆಯಲ್ಲಾ ಆ ಕಂದನನು ಮರಳಿ ಎದೆಗಪ್ಪಿಸಲಿಯನೇ?

ಮಾತೆ— (ಶೋಕ ಹೆಚ್ಚಿ) ಇಲ್ಲ, ಮಗೂ, ಇಲ್ಲ! ಇನ್ನಿವನು ಚೆಲುವಾದ ಈ ತಿರೆವೆಣ್ಣಿನಂಕದಲಿ ಸಂಚರಿಸಲಾರನು: ಕಾಲ್ಗಳುಡುಗಿಹವು! ಇನ್ನಿವನ ಕೊರಲಿನಿಂದ ಮಾನವರಾಡುವ ಇಂಚರದ ಮಾತುಗಳು ಹೊರಹೊಮ್ಮಲಾರವು: ನಾಲಗೆಯುಳಿದಿಹುದು! ಇನ್ನೀತನೆದೆಯಲಿ ಸತಿಪ್ರೇಮ, ಸುತವಾತ್ಸಲ್ಯ, ಒಂಧುಮಮತೆ, ಕರುಣೆ, ನಯ, ದಯೆ ಮೊದಲಾದ ಮಾನವೀಯ ದಿವ್ಯ ಭಾವಗಳಲಿ ಒಂದಾದರೂ ಮೂಡಲರಿದು! (ಬಿಕ್ಕಿ ಬಿಕ್ಕಿ ಅಳುವಳು) ನಗಲಾರನಿವನು! ಈತನಳಲೂ ಆರನು! ಸುಖಪಡಲಾರನು! ದುಃಖಪಡಲೂ ಆರನು!—ಶಿವಶಿವಾ, ಸಾವಿನ ಮೌನಕಿಂತಲು ಬಾಳಿನ ಗೋಳೆ ಲೇಸಲ್ತೆ?—ಕಂದಾ, ಈತನೀಗೊಂದು ಬರಿಯ ಎಲುಬು ಬಾಡುಗಳ ಗೂಡು! ಬರುವವರು ಹೇಳದಿಹ, ಇರುವವರು ಕಾಣದಿಹ, ಹೋದವರು ಬಾರದಿಹ ಸಾವಿನ ನಾಡು ಇವನಿಗೆ ಬೀಡು! ಈಗಳೀತಂಗೆ ಪಿತತ್ವವಿಲ್ಲ, ಪತಿತ್ವವಿಲ್ಲ, ಬಂಧುತ್ವವಿಲ್ಲ, ಶತ್ರುತ್ವವಿಲ್ಲ! ಈತನೀಗ ಳಣ್ಣನೂ ಅಲ್ಲ, ತಮ್ಮನೂ ಅಲ್ಲ—

ಕಂದ— (ಬೆಚ್ಚಿ) ಇನ್ನೇನಾಗಿರುವನಮ್ಮಾ?

ಮಾತೆ— (ದುಃಖಾತಿಶಯದಿಂದ) ಹೆಣ! ಹೆಣ! ಸತ್ತ ಸುಡುಗಾಡಿನ ಹೆಣ!

ಕಂದ— (ಕಂಬನಿತುಂಬಿ) ತಾಯೇ, ನಾವರಸುತಿರುವ ನನ್ನ ತಂದೆಯೂ ಇವನಂತೆಯೆ ಆಗಿರುವನೇನು?

ಮಾತೆ—(ಕಂದನನ್ನು ಬಿಗಿದಪ್ಪಿ ರೋದಿಸುತ್ತ) ಅಯ್ಯೋ, ನನ್ನ ಜೀವದ ಕಣ್ಣೇ, ಬಾಳಿನ ನಲ್ಮೆಯನಿಂತು ತೋರುತಿಹ ನಿನ್ನ ಮುಗ್ಧತನದೆದುರು ಸಾವೆನಿತು ಕರ್ಕಶತರವಾಗಿ ತೋರುತಿದೆ!

[ಮಾತೆಯು ಬಿಕ್ಕಿಬಿಕ್ಕಿ ಅಳುವ ಕಂದನನ್ನು ಕರೆದುಕೊಂಡು ಗೋಳಿಡುತ್ತ ಕತ್ತಲೆಯಲ್ಲಿ ಅದೃಶ್ಯವಾಗುವಳು.]

———

## ದೃಶ್ಯ ೩

[ಅದೇ ಮಸಣದ ಮತ್ತೊಂದೆಡೆ. ಕತ್ತಲಲ್ಲಿ ಪಿಶಾಚಾಕೃತಿಯುಳ್ಳ ಮರುಳು ಗಳೆರಡು ಭಯಂಗೊಂಡು ಬಿರುಬಿರನೆ ಬರುವುವು. ಹಿಂದೆ ಹಿಂದೆ ನೋಡಿ ಕಿಟ್ಟನೆ ಚೀರುವುವು.]

೧ನೆ ಮರುಳು—ಅಕ್ಕ, ನನಗಿನ್ನುಂ ಆ ಹಾಳು ದುರ್ಯೋಧನಂ ಮತ್ತೆಲ್ಲಿ ಗದೆವೀಸಿ ಬರುವನೋ ಎಂದಳ್ಕು! ಮಾನವರು ಕೊಲೆಗೆ ಕೈಯಿಡೆ ಮಾರಿಯುಂ ವಿನಾರ್ದಪರು!

೨ನೆ ಮರುಳು—ತಂಗೆ, ತೆಗೆ ತೆಗೆ ಪುಸಿಯಳ್ಕಂ! ಇನ್ನೆಲ್ಲಿಯ ದುರ್ಯೋಧನಂ! ಭೀಮನ ಗದೆಯ ಪೆಟ್ಟಿನಿಂ ವೈಶಂಪಾಯನ ಕೊಳದ ತಡಿಯೊಳು ತೊಡೆಯೊಡೆದು ಪಟ್ಟಿಹನು.

೧ನೆ ಮರುಳು—ಅಂತಾಗಲೆಬೇಕು ಆ ದುರುಳಂಗೆ!

೨ನೆ ಮರುಳು—ವಿಧಿವಿಳಸನದಿಂ ಅಂತಾದುದು; ಇಲ್ಲದಿರೆ ಭೀಮಂಗದುವೆ ಪಾಡಾಗುತಿತ್ತು. ನಾನಲ್ಲಿಯೆ ನಿಂತು ನೋಡಿದೆನು ಅವರ ಗದಾಯುದ್ಧಮಂ.—ಕೌರವನು ಸೋತು ಸೋತವನಲ್ಲ; ಭೀಮನು ಗೆದ್ದು ಗೆದ್ದವನಲ್ಲ.

೧ನೆ ಮರುಳು—(ದೂರ ನೋಡಿ) ಅಕ್ಕ, ಇದೇಂ ಮಾನವರ ಮರುಳಾಟಂ ಎಮ್ಮ ಮರುಳ್ತನಮಂ ಗೆಲುವಂತಿರ್ಪುದು!

೨ನೆ ಮರುಳು—ನಿಶ್ಚಯಂ; ನಮಗೆ ಒಂದಿನಿತು ನಿಲಲುಂ ಎಡೆಯಿಲ್ಲ. ಮಾನವರ ಮಂದೆಯೇ ಮಸಣಮಂ ಮುತ್ತಿಹುದು.

೧ನೆ ಮರುಳು—ಎಮ್ಮ ಇರುಳಲೆತಮಂ ತಾವು ಪಡೆದು ನಕ್ತಂಚರಿಗಳಾದಂತೆ ತೋರುವುದು.

೨ನೆ ಮರುಳು—ಈ ಎಡೆಯೊಳಾರುಂ ತೋರ್ಪುದಿಲ್ಲ. ಇಲ್ಲಿನಿತು ನಿಂತು ಬಳಲ್ಕೆಗಳೆದು ಮುಂ ತೆರಳುವಂ.—ತಂಗೆ, ಏಂ ಭಯಂಕರಂ

ಈ ಕುರುಕ್ಷೇತ್ರ ಸಂಗ್ರಾಮ ರಂಗಂ? ಮರುಳ್ಗಂ ಮರುಳ್ಪಿಡಿದು ಪೋಪಂತೆ ಕೊಲೆಕಳೆಯೇರಿರ್ಪುದು.

೧ನೆ ಮರುಳು—ಪಿಂತಣ್ಗೆ ಮತ್ತಾವ ಕಾಳೆಗದೊಳುಂ ಇಂತಪ್ಪ ಬೀರಮುಂ, ಇಂತಪ್ಪ ಕೊಲೆಯುಮಂ ನಾಂ ಪಾರ್ದರಿಯೆಂ.

೨ನೆ ಮರುಳು—ಏಂ ಮಚ್ಚರವೋ? ಏಂ ಕಾಳೆಗದ ಪುಚ್ಚೋ! ಈ ಕೀಳ್ಮಾನಿಸರ್ಗೆ! ಇವರನಾನುಂ ಪೇಸುವೆಂ!

೧ನೆ ಮರುಳು—(ಭಯದಿಂದ) ಅಕ್ಕ, ಅತ್ತ ನೋಡಲ್ಲಿ!

೨ನೆ ಮರುಳು—ಮರುಳೋ? ಮಾನವಳೋ?

೧ನೆ ಮರುಳು—ಮರುಳಲ್ತು. ಮರುಳು ಇಂತಗುರ್ವ ಪಡೆದು ತೋರ್ಪುದಿಲ್ಲಾವಗಂ! ಆವಳೋ ನರೆ-ದಲೆಯ ಮುದಿಯಳಲ್ತೆ?

೨ನೆ ಮರುಳು—ತಂಗೆ, ಕೆದರಿರ್ಪ ನರೆನವಿರಿನಿಂದೇಂ ರೌದ್ರಮಾಗಿಹಳು? ಪೆಣಗಳ ನಡುನಡುವೆ ಅದೇನಂ ಬಾಗಿ ಬಾಗಿ ಅರಸುತಿಹಳು?

೧ನೆ ಮರುಳು—ತನ್ನ ಣುಗನಂ ಪುಡುಕುತಿರ್ಪಂತೆ ತೋರ್ದಪುದು. ಅಗೋ, ಪಾವನಮಪ್ಪ ತಾಯ ಒಲ್ಮೆವೆಳಗು ಪರಿವೇಷದಂತೆ ಆಕೆಯಂ ಬಳಸಿ ಪೆಣದಿನಿಗಳಂ ಪೊಯ್ದೋಡಿಸುತಿಹುದು! ಇತ್ತಣ್ಗೆ ಬಳಿಸಾರಿ ಬರ್ಪಳು! ಬಾರಕ್ಕಾ, ಮರೆಯಾಗುವಂ!

[ಮರುಳುಗಳು ಮಾಯವಾಗುವುವು. ಹಣ್ಣುಹಣ್ಣು ಮುದುಕಿಯೊಬ್ಬಳು ತನ್ನ ಮಗನನ್ನು ಹುಡುಕುತ್ತ ದೊಣ್ಣೆಯೂರಿಕೊಂಡು ಮೆಲ್ಲನೆ ಬರುವಳು. ಆಕೆಯ ಮಗನು ಕೌರವಪಕ್ಷದಲ್ಲಿ ನಿಂತು ಹೊಡೆದಾಡಿ ಮಡಿದ ಕಾಲಾಳುಗಳಲ್ಲಿ ಒಬ್ಬನು. ಬಂದ ಮುದುಕಿಯು ನಿಂತು ಸುತ್ತಲೂ ನೋಡಿ ನಿಡುಸುಯ್ದು ನಿರ್ವಿಣ್ಣ ಭಾವವನ್ನು ಪ್ರದರ್ಶಿ

ಸುವಳು. ಆಕೆಯ ಮಾತುಗಳು ಆಯಾಸದಿಂದ ಅಸ್ಪಷ್ಟ. ನಡುನಡುವೆ "ಅಯ್ಯೋ; ಉಸ್" ಎಂಬ ಪದಗಳಿಂದ ವಿಶ್ರಾಂತಿ ತೆಗೆದುಕೊಳ್ಳು ವಳು.]

ಮುದುಕಿ—ತೊಳಲಿದನಿತುಂ ಬಿತ್ತರಿಸುತಿಹುದಲ್ಲಾ ಈ ಪಾಳು ಪೆರ್ಮ ಸಣಂ! ಮುದಿತನಂ ಬರೆವರೆ ಜವ್ವನದ ಕಿರಿಯು ತಿರೆ ಬಿತ್ತರ ಮಾಗಿ ಪಿರಿದಪ್ಪುದೆ ಸಾಜಂ! ಅಯ್ಯೋ, ನನ್ನ ಮಗನೆತ್ತ ಪೋದನೋ ಎಲ್ಲಿಹನೋ ಕಾಣೆನಲ್ಲಾ. ತೊಳಲಿ ತೊಳಲಿ ಬಾಗಿ ಬಾಗಿ ಹೆಣಗಳಂ ನೋಡಿ ನೋಡಿ ನನ್ನ ನಡು ಬೇನೆಯಿಂ ಸಿಡಿಯುತಿದೆ. (ಸೊಂಟದ ಮೇಲೆ ಕೈಯಿಟ್ಟು ಬೇನೆ ಯನ್ನು ಮುಖಭಂಗಿಯಿಂದ ಪ್ರದರ್ಶಿಸುವಳು) ಕರೆದು ಕರೆದು ಕೂಗಿ ಕೂಗಿ ನನ್ನ ಕೊರಲು ಒಣಗಿಹುದು. (ನಿಟ್ಟುಸಿರೆಳೆದು ಕುಳಿತುಕೊಂಡು ಶ್ಮಶಾನದ ವಿಸ್ತಾರವನ್ನೆಲ್ಲಾ ದೃಷ್ಟಿಸಿ "ಉಸ್" ಎನ್ನುವಳು) ಇದೇನು ಕೊಲೆಯಾಟವೋ ಇಳೆಯು ಎನ್ನ ಕಂದರಿಗೆ ನಾನರಿಯೆಂ! (ತಲೆಯ ಮೇಲೆ ಕೈ ಹೊತ್ತುಕೊಂಡು ದೀರ್ಘವಾಗಿ ಆಲೋಚಿಸುವಳು) ಅಯ್ಯೋ ಮಗೂ! ನಿಚ್ಚಮುಂ ಬೈಗುವೊಳ್ತಿನಲಿ ಗುಡಿಸಲ್ಗೆ ಬಂದು ನಾನಿತ್ತ ಕೈತುತ್ತು ಗಳಂ ಮೆಲ್ಲುತ್ತ ಅಂದಂದಿನ ರಣವಾರ್ತೆಯಂ ಪೇಳುತಿರ್ದವಂ ಇಂದೇತಕೆ ತಳುವಿದೆಯೊ? ನಿನಗೋಸುಗಂ ನಲ್ಲುಣಿಸಂ ಸಮೆದು ನೀನೈತರ್ಪ ಬಟ್ಟೆಯನೆ ನಿಟ್ಟಿಸುತ ಬಾಗಿಲೊಳೆ ಕುಳಿತು ಕಾದೆಂ. ಈಗಳೈತರ್ಪಂ ಆಗಳೈತರ್ಪಂ ಇನ್ನೇ ನೈತರ್ಪಂ ಎಂದು ಹಾರೈಸುತಿರೆ ನೇಸರನ್ನೆಗಂ ಪಡುವಣ ಬಾನ್ದೆಸೆಯೊಳು ಬೈಗುಗೆಂಪಂ ಚೆಲ್ಲಿ ಒಯ್ಯನೆ ಮುಳುಗಿ ದುದು. ಕಳ್ತಲೆಯ ಮಬ್ಬು ತಿರೆಯೊಳುಂ ಮೇಣೆನ್ನೆರ್ದೆ ಯೊಳುಂ ಒರ್ಮೆಯೆ ಪರ್ಬಿದುದು.—ಅಯ್ಯೋ ಇನ್ನೇನಂ ಮಾಳ್ಪೆಂ? ಇನ್ನೆತ್ತಣ್ಗೆ ಪೋದಪೆಂ? (ಕರೆಯುವಳು) ಓ ಎನ್ನ ಕಂದಾ, ನಾರಾಯಣಾ! ನೀನೆಲ್ಲಿರ್ಪಯ್? ಬಳಿಗೆ

ಬಾರಯ್! ನಿನ್ನಜ್ಜಿಯುಂ ಸಂತವಿಡಯ್! ಎನಗಿನ್ನಾರಿರ್ಪರ್? ಎನಗೆ ನೀನೆ ಕಣ್! ನೀನೇ ಬಾಯ್! ನೀನೆ ಎರ್ದೆ! ನೀನೆ ಜೀವಂ! (ರೋದಿಸುವಳು) ಕಂದಾ ನಾರಾಯಣಾ! ನಾರಾಯಣಾ!

[ಕೃಷ್ಣನು ತನ್ನ ಭಕ್ತಶ್ರೇಷ್ಠನಾದ ವಿದುರನೊಡಗೂಡಿ ಅಲ್ಲಿಗೆ ಬರುವನು. ಆ ರಾತ್ರಿ ಆತನು ತೆರಪಿಲ್ಲದೆ ಕುರುಕ್ಷೇತ್ರ ಶ್ಮಶಾನದಲ್ಲಿ ಸಂಚರಿಸಿ ಸಾಯುವವರಿಗೆ ಮುಕ್ತಿಯನೀಡಾಡುವ ಮಹಾಕಾರ್ಯದಲ್ಲಿ ತೊಡಗಿದ್ದಾನೆ. ಮುದುಕಿಯು ಅಲ್ಲಿಗೆ ಬಂದ ಮಾರುವೇಷದ ಕೃಷ್ಣನನ್ನು ನೋಡಿ ಕೇಳುವಳು.]

ಮುದುಕಿ—ಅಪ್ಪಾ ಮಕ್ಕಳಿರಾ, ಎನ್ನ ನಾರಾಯಣಂ ಎಲ್ಲಿರ್ಪನೆಂದು ತೋರ್ಪಿರಾ?

ಕೃಷ್ಣ— (ಮೃದುಮಧುರ ಧ್ವನಿಯಿಂದ) ನಿನ್ನ ನಾರಾಯಣನಾರಜ್ಜೀ?

ಮುದುಕಿ—ನನ್ನ ನಾರಾಯಣನಂ ಅರಿಯದವಂ ನೀನೆಂತಹ ಕಿರಿಯವನೊ? ನಮ್ಮವರೊಳಂ ಮೇಣರಿಗಳೊಳಂ ನನ್ನ ನಾರಾಯಣನ ಬಲ್ಮೆಯಂ ತಿಳಿಯದರೊಳರೇ?

ಕೃಷ್ಣ— (ಸ್ವಲ್ಪ ಆಲೋಚಿಸುವಂತೆ ನಟಿಸಿ) ಬಲ್ಲೆಂ, ತಾಯೆ, ಬಲ್ಲೆಂ. ಮನ್ನಿಸು ತಪ್ಪಂ. ನಿನ್ನ ನಾರಾಯಣಂ ಈ ದಿಕ್ಕಿನೊಳೆ ಮಲಗಿಹಂ. ಪೋಗಿ ಕಾಣಜ್ಜೀ!

ಮುದುಕಿ—(ಆಶ್ಚರ್ಯದಿಂದ) ಮಲಗಿಹಂ? ಏಕೆ ಮಲಗಿಹಂ?

ಕೃಷ್ಣ— ಏತಕೆರೋ? ತಾಯೆ, ನಾನರಿಯೆಂ. ನಾಂ ಬರ್ಪ ವೇಳೆಯೊಳು ನಿನ್ನನೇ ಕೂಗತಿರ್ದಂ.

ಮುದುಕಿ—(ಕೃಷ್ಣನ ಕಡೆಗೆ ಕೈನೀಡಿ) ಮಗೂ, ಬಾ ಇಲ್ಲಿ. ನನ್ನಂ ಮೇಗೆತ್ತಿ ನಿಲ್ಲಿಸು. (ಕೃಷ್ಣನು ಆದರದಿಂದ ಎತ್ತಿ ನಿಲ್ಲಿಸುವನು) ಏನಪ್ಪಾ ನಿನ್ನ ಕೈಗುಣಂ! ಎನ್ನ ಬಳಲ್ಕೆಯನಿತುಮುಂ ದೂರವಾಗಿ ಮೆಯ್ಗನಿತು ಬಲ್ಮೆಮೈದೋರಿಹುದು!

ಕೃಷ್ಣ— (ಮುಗುಳ್ನಗೆಯಿಂದ) ಜವ್ವನದ ಸಾನ್ನಿಧ್ಯಮೇ ಜವ್ವನಮಂ
ತಂದಪ್ಪುದಜ್ಜೀ!

ಮುದುಕಿ—ಮಗೂ, ನಿನಗೊಳ್ಳಿತಕ್ಕೆ! (ತೆರಳುವಳು)

ವಿದುರ— ವಾಸುದೇವ, ಏಂ ಲೀಲೆ? ಏಂ ಮಾಯೆಯಿದು ನಿನದು?
ಮುಕ್ತಿಗೆ ಮಹಾದ್ವಾರಮಾಗಿರ್ಪುದೀ ಪೊಳ್ತು
ಈ ಕುರುಕ್ಷೇತ್ರ ಶ್ಮಶಾನಂ!

ಕೃಷ್ಣ— ವಿದುರ, ಇಂದೆಸಗೆ
ಬಿಡುವಿಲ್ಲ. ಆಲಿಸು! ಮೃತ್ಯುಮುಖರಾದವರು
ತಿಳಿಯದೆಯೊ ಮೇಣ್ ತಿಳಿದೊ ಕರೆಯುತಿರ್ಪರೆನ್ನಂ.
ಆರಾದೊಡಂ ಆವನೆವದಿನಾದೊಡಂ ಎನ್ನ
ಗಣನೆಯಿಲ್ಲದ ನಾಮಗಳೊಳೊಂದನಾದೊಡಂ
ಮರಣಕಾಲದೊಳುಸುರಿದರೆ ಎನ್ನ ನಿತ್ಯಪೆಂ.
ಇಂದಾಸು ಸಾವರೆಲ್ಲರ ಬಳಿಯೊಳಂ ಇರ್ದು
ಪಕ್ಷಪಾತಂಗೈಯದೆಯೆ ಭವದ ಬಂಧನವ
ತುಂಡರಿಸಿ, ಬಿಕ್ಕುವಂ ಬಿಡುಗಡೆಯ ಹಬ್ಬಮಂ!

ವಿದುರ— ದೀನ ಸಂರಕ್ಷಕನೆ, ದುರ್ಜನರು ಸಜ್ಜನರು
ಎಂಬ ತರತಮ ಭಾವಮಿಲ್ಲದೆಯೆ ಎಲ್ಲರ್ಗೆ
ಪದವಿಯೊಂದನೆ ಕೊಟ್ಟು ಪೊರೆವಮೇನು?

ಕೃಷ್ಣ— ಭಕ್ತವರ, ಕೇಳು: ಸನ್ನಿವೇಶಂ ದೊರೆಯೆ
ದುರ್ಮಾರ್ಗದೊಳು ಕಾಲಿಡಲರಿಯದ ಸಜ್ಜನರು
ಈ ಲೋಕದಲ್ಲಿಲ್ಲ; ಮೇಣು ಸನ್ಮಾರ್ಗದೊಳು
ಬೀಳಲಾರದ ದುರ್ಜನರು ಸೃಷ್ಟಿಯೊಳಗಿಲ್ಲ.
ದೇಶಕಾಲಗಳಿಂದೆ ಬದ್ಧವಾಗಿಹ ನೀತಿ
ಎರಡುಮಂ ಮೀರಿರ್ಪ ಮುಕ್ತಿಗೇಂ ಹೊಣೆಯಹುದೆ?
ಅಂತರಂಗದ ಮೂಲತತ್ತ್ವಮನರಿಯದಿಹ

ಕುಬ್ಜದೃಷ್ಟಿಯು ನರರು ತೆಗಳುವರು, ನೂಕುವರು
ಎಂದಾನು, ಎಲ್ಲಮುಂ ತಿಳಿದಾನುಂ ಅಂತೆಸಗೆ
ನನ್ನಿಗೇ ಕುಂದಹುದು. ಎನಗೆ ದ್ವೇಷಿಗಳಿಲ್ಲ;
ಪ್ರಿಯರುಮಿಲ್ಲ! ಎನ್ನ ದಿಟ್ಟಿಗೆ ಎಲ್ಲರೊಂದೇ!

ವಿದುರ— ಪರಮ ಕರುಣಾಕರನೇ,
ವೇದಗಳು, ಶಾಸ್ತ್ರಗಳು, ಆಗಮ ಪುರಾಣಗಳು,
ಸಜ್ಜನತೆ, ದುರ್ಜನತೆ, ಧರ್ಮಂ, ಅಧರ್ಮಂ,
ನೀತಿ, ಅನೀತಿ, ಪಾಪಪುಣ್ಯಗಳೆಂಬ
ಸ್ವರ್ಗನರಕಗಳೆಂಬ ತಾರತಮ್ಯವನೊರೆದು
ವಿಧಿನಿಷೇಧಂಗಳಂ ಬೋಧಿಸಿರ್ಪವದೇಕೆ?

ಕೃಷ್ಣ— (ಗಗನವನ್ನು ನೋಡಿ ಸ್ವಲ್ಪ ಹೊತ್ತು ಸುಮ್ಮನಿದ್ದು)
ಭಕ್ತಿಯೋಗಿಯೆ, ವಿದುರ, ವೇದಶಾಸ್ತ್ರಗಳೆಲ್ಲ
ನನ್ನೊಂದಂಶದ ವಾಣಿ; ನನ್ನ ವಾಣಿಯಲ್ಲ.
ವೇದಗಳಿಗಿಂತಲುಂ, ಶಾಸ್ತ್ರಗಳಿಗಿಂತಲುಂ,
ಯೋಗಿ ಮುನಿಗಳಿಗಿಂತಲುಂ ಪಿರಿದು ಎನ್ನೆದೆಯ
ಬಿತ್ತರಂ. ವೇದಂಗಳೆಡೆಗುಡದ, ಶಾಸ್ತ್ರಗಳು
ಬಳಿ ಸೇರಿಸದ, ಸಿದ್ಧಯೋಗಿಗಳು ಸೇರಿಸದ
ಪಾಪಿಗಳಿಗೆನ್ನೆರ್ದೆಯೊಳೆಡೆಯಿಹುದು; ಸೊಗಮಿಹುದು.
ಎನಗೆ ಬೇಡದವರಾರಿಲ್ಲ; ತಾವಿಹುದು
ಎನ್ನೊಡೊಲೊಳೆಲ್ಲರ್ಗ. ರಹಸ್ಯಮಿದನಾಲಿಸಯ್:
ಎನ್ನೊಳು ನಿಷೇಧಮೆಂಬುದೆ ಇಲ್ಲ; ನೀತಿಯುಂ,
ಸತ್ಯಮುಂ, ಧರ್ಮಮುಂ ಮೆಯ್ಯೊಡವೆಗಳೆನಗೆ;
ಎನ್ನಂ ಬಿಗಿವ ಶೃಂಖಲೆಗಳಲ್ಲ. ಭಕ್ತವರ,
ನಾಂ ಬರಿಯ ತತ್ತ್ವಗಳ ಗುಂಪಲ್ಲ; ಮೇಣಾನು
ಬರಿಯ ವ್ಯಕ್ತಿಯುಮಲ್ಲ; ರಸಪೂರ್ಣಮಾಗಿರ್ಪ

ಜಗದಾದಿ ಚೈತನ್ಯ ವ್ಯಕ್ತಿತ್ವಮೆಂದರಿ!
ಕ್ಷುದ್ರಮುಹ ನಿಯಮಗಳಿಗಿಂತಲುಂ ದೊಡ್ಡವಂ;
ಶುಷ್ಕಮುಹ ತತ್ತ್ವಗಳಿಗಿಂತಲುಂ ರಸಮಯಂ;
ನರೆತಿರ್ಪ ನೀತಿಗಿಂತಲು ನಾನು ಮೊದಲವಂ!
ನಾಟಕರಂಗದಲಿ ರಾಜಮಂತ್ರಿಗಳೆಂಬ,
ಸೈನಿಕರು ಸೇನಾನಿ ಪ್ರಜೆಗಳೆಂದೆಂಬ,
ಸಜ್ಜನರು ದುರ್ಜನರು ಪಾಪಿಗಳೆಂದೆಂಬ
ಭೇದಮಂ ಲೀಲೆಗೋಸುಗಮಾಗಿ ನಾನುಲಿವೆಂ.
ಲೀಲೆ ಮುಗಿಯಲ್ಕೆಲ್ಲರೊಂದಾಗಿ ಪೋದಪರು!
ನಾಟಕದ ಕಳ್ಳನಂ ಪಿಡಿದು ಸೆರೆಮನೆಗುಯ್ಯೆ
ಏನಾಟಮಾದಪುದು! (ದೂರ ಭಗವನ್ ವಾಸುದೇವ ಎಂಬ
ಸದ್ದಾಗುವುದು) ಕೇಳದೋ, ಭಕ್ತವರ!
ಚಿತ್ರಸ್ವಪ್ನವನೊಡೆಯುವಂ ಬಾ, ಪೋಗುವಂ.

[ಕೃಷ್ಣನು ಗಂಭೀರವಾಗಿ ತೆರಳುವನು. ಹಿಂದೆ ವಿದುರನು ಅಂತರ್ಮುಖಿಯಾಗಿ ಅನೈಚ್ಛಿಕವಾಗಿಯೇ ಹೋಗುವನು.]

---

# ದೃಶ್ಯ ೪

[ಕುರುಕ್ಷೇತ್ರದ ಮತ್ತೊಂದೆಡೆ. ಸಂಜಯನೊಡಗೂಡಿ ಧೃತರಾಷ್ಟ್ರನೂ ಗಾಂಧಾರಿಯೂ ಬರುವರು. ಗದಾ ಯುದ್ಧದಲ್ಲಿ ಭೀಮನಿಂದ ಪರಾಜಿತನಾದ ಕೌರವನು ಎಲ್ಲಿರುವನೆಂದು ಹುಡುಕಿಕೊಂಡು ಹೋಗುತ್ತಿರುವರು]

ಸಂಜಯ—(ಸುತ್ತಲೂ ನೋಡಿ ದುಃಖದಿಂದಲೂ ವಿಸ್ಮಯದಿಂದಲೂ)

ಸದ್ದಿಲಿಯಿರುಳಿದೇನು ಸಯ್ತು ಪೆಣದಂತಿಹುದು!
ಆರ್ತನಾದಗಳೆಲ್ಲ ಮೌನಮನೆ ಪೆರ್ಚಿಪವು.
ಕಣ್ಗಂ ಮನಕ್ಕಂ ಭಯಂಕರಮಾಗಿರ್ಪುದು
ಈ ಸುಡುಗಾಡ ನೋಟಂ! ಕಣ್ಗಳಿಲ್ಲದ ನೀನೆ
ಧನ್ಯನಾದಯ್ ಇಂದು, ಧೃತರಾಷ್ಟ್ರ ಭೂಮಿಪನೆ
ಐದಿಂದ್ರಿಯಂಗಳಿಂದೈತರ್ಪ ಬಲ್ವೇನೆ-
ಗಿಂತಲುಂ ನಾಲ್ಕಿಂದ್ರಿಯಂಗಳಿಂ ಬಹ ಬೇನೆ
ಇನಿತು ಲಘುತರಮೈಸೆ?

ಧೃತರಾಷ್ಟ್ರ— ಪುಸಿಯದಿರು, ಸಂಜಯ.

ಕಣ್ಣರಿಯದಿಹ ನೋವು ಕಿವಿಗಳಿಗೆರಡು ಮಡಿ-
ಯಾದಪುದು. ಓ ವಿಧಿ, ಕುರುಡಿಂಗೇತರ್ಕೆ
ಕಿವುಡುಮಂ ಪೊರ್ದಿಸದೆ ನೀನೆನ್ನ ಮಾಡಿದೈ?

ಗಾಂಧಾರಿ—(ದುಃಖದಿಂದ)

ಸಂಜಯ, ಪೊಳ್ತಿಡೆಯೊಳೆನ್ನಣುಗಂ ಬೆರಸಿ
ರಣರಂಗಕಯ್ತಂದೆ. ತೋರವಸನೀಗಳ್.
ಎಲ್ಲಿರ್ಪನಾತಂ?—ಹಾ ಮಗನೆ ನಿನ್ನನಾಂ
ಬಯ್ದುದಂ ಮನ್ನಿಸೈ. ಆರ್ಗೆ ನೀನೇನಾದರೇಂ?
ಸಲ್ಗುವರನೆನಗೆ ನೀಂ! ದೈವಕ್ಕೆ ದ್ರೋಹಿಯೋ!
ಧರ್ಮಕ್ಕೆ ಬಾಹಿರನೊ? ನನ್ನಿಗಪರಾಧಿಯೋ?

ಸಜ್ಜನಕೆ ಪಾಪಿಯೋ? ಭೀಮಂಗೆ ಶತ್ರುವೋ?
ಎನಗಂತುಂ, ಓ ಕಂದ, ಮುದ್ದು ಕುವರಂ ನೀಂ!
ತಂದೆಯು ತೊರೆದನೆಂದು, ತಾಯಿ ಪಳಿದಳೆಂದು,
ಮಿತ್ರರು ಅಳಿದರೆಂದು, ಗುರುಸುತನುಳಿದನೆಂದು
ನೊಂದೆಯೇಂ? ಬೆಂದೆಯೇಂ? ಸತ್ತೆನ್ನಂ ಕೊಂದೆಯೇಂ?
ಅಯ್ಯೋ ಮುನಿಯಬೇಡೆನಗೆ ಕಂದಾ! (ಅಳುವಳು)

ಸಂಜಯ—(ಸ್ವಗತ) ಸಂತವಿಡಲಾರೆಂ; ಸುಮ್ಮನಿರಲೂ ಆರೆಂ;
ಅಳುವರಂ ಸಂತವಿಡೆ ಅಳಲುಕ್ಕಿ ಪರಿದಪುದು.
ಅಳಲು ಕಂಬನಿಯಾಗಿ ಪರಿಯಲ್ಕದುವೆ ಶಾಂತಿ.
ಮಸಣದಲಿ ಒಣತತ್ತ್ವಗಳನೊರೆಯೆ ತರಮಲ್ತು!
ಗೋಳಾಡುವರ ಕೂಡೆ ಗೋಳಿಡುವುದೇ ಲೇಸು!
ಪಡೆದ ಬಸಿರಿನ ನೋವನಾರು ಸಂತೈಸುವರು?
(ಬಹಿರಂಗ) ದೇವಿ, ಕುರುಕುಲಲಲಾಮನನ್ವೇಷಣೆಗೆ
ಸೇವಕರನಟ್ಟಿಹೆನು.—ದೊರೆಯೆ, ಬಾ ತೆರಳುವಂ;
ಬಳ್ದ ಮಗನಂ ಮಡಿವ ಮುನ್ನಮೆ ಕಾಣುವಂ.
ತಳುವಿದರೆ ಕೈಮಿಂಚುವುದು ಕಜ್ಜಂ.

ಧೃತರಾಷ್ಟ್ರ—ಸಂಜಯ, ನೀನೆನ್ನ ಕಣ್ಬೆಳಕು; ನೀನೆನ್ನ
ಕೈಗೋಲು. ಮುಂದೆ ನಡೆ, ಬಂದಪೆಂ. (ಗಾಂಧಾರಿಗೆ)
ಬಾ, ಬಾ;
ಕಂಬನಿಯ ಪೊಳೆಯೊಳೆ ತೇಲಿ ಪೋಗುವಂ, ಬಾ!

[ಎಲ್ಲರೂ ತೆರಳುವರು. ಭಾನುಮತಿಯು ಒಬ್ಬಳು ಸಖಿಯೊಡನೆ ಬರುವಳು. ಆಕೆಯ ದುಗುಡವು ಮಾತಿಗೆ ಮೀರಿದೆ. ಹುಚ್ಚಳಂತಿದ್ದಾಳೆ.]

ಸಖಿ— ಭಾನುಮತಿ, ತಾಯಿ, ಇತ್ತಲೈತರು. ಅದೋ
ಸಂಜಯನೊಡಗೂಡಿ ದೇವರುಂ, ದೇವಿಯುಂ
ಪೋದಪರು.

(ಸ್ವಗತ)     ಕಂಬನಿಯ ಮುನ್ನೀರೊಳನಿಬರುಂ
ಮುಳುಗಿರೆ ಆರನಾರ್ ದಡಕೆಳೆದು ರಕ್ಷಿಪರ್?

[ಭಾನುಮತಿ ಮುಸುಗುಹಾಕಿಕೊಂಡು ಶೋಕದ ಛಾಯೆಯಂತೆ ಸಖಿಯೊಡನೆ ಹೋಗುವಳು.]

---

## ದೃಶ್ಯ ೫

[ಶ್ಮಶಾನ ಕುರುಕ್ಷೇತ್ರದ ಮುಗುದೊಂದೆಡೆ. ಧರ್ಮರಾಯ, ಭೀಮ, ಅರ್ಜುನ, ದ್ರೌಪದಿ ಮೊದಲಾದವರು ಬರುವರು, ಘಟೋತ್ಕಚ, ಅಭಿಮನ್ಯು ಮೊದಲಾದ ನಂಟರಿಷ್ಟರ ಅನ್ವೇಷಣೆಗಾಗಿ ಧರ್ಮರಾಯನು ಶ್ಮಶಾನವನ್ನು ನೋಡಿ ದುಗುಡದಿಂದ ನಿಟ್ಟುಸಿರೆಳೆಯುವನು.]

ಧರ್ಮರಾಯ—ಇದೆ ಎನ್ನ ಧರ್ಮಕ್ಕೆ ಪ್ರತಿಫಲಂ! ವಾಯುಸುತ,
ನೋಡಿದೊ ನಿನ್ನ ಬಲ್ಮೆಯು ಕಿಚ್ಚು ಬೇಳ್ದಿರ್ಪ
ದ್ವಾಪರ ಮಹಾಪುರುಷನುಪವನಂ!

ಭೀಮ— ಅಹುದಹುದು,
ಧರ್ಮಂ ಬೇಳ್ದಿರ್ಪ ಅಧರ್ಮದುದ್ಯಾನಂ;
ಪುಣ್ಯಾಗ್ನಿಗಾಹುತಿಯಾದ ಪಾಪದ ಬೆಳಸು!

ಅರ್ಜುನ—ಕೊಲೆಯು ಮುನ್ನುಡಿಯೇಕೆ ಧರ್ಮಸಂಸ್ಥಾಪನೆಗೆ ?
ರಕ್ತರಣಧುನಿ ಹರಿಯದೆಯೆ ಧರ್ಮಂ ಭೂತಳಕೆ
ಕಾಲಿಡದೆ? (ದ್ರೌಪದಿ ಅರ್ಜುನನನ್ನು ನೋಡಿ ಮುಗುಳ್ನಗುವಳು.)

ಭೀಮ— ಪೋಗಿ ಕೇಳಾ ಕೃಷ್ಣನಂ, ಪೇಳ್ವಂ.
ವಿಕಾಸಮಾಗುವುದರೊಳೆ ವಿನಾಶಮೈತಂದಪುದು.
ಬೋಧನೆಯ ಮಾರ್ಗಕ್ಕೆ ಶತಮಾನಗಳೆವೇಳ್ಕುಂ;
ವಿಪ್ಲವದ ಪಥವಿಡಿಯೆ ದಿನಮೆರಡೆ ಸಾಲ್ಗುಂ.
ಯುಗಯುಗಗಳೆದೆಗೆ, ಒರ್ದಿನಂ ಗದೆಗೆ!
ಪದಿನೆಂಟೆ ದಿನಗಳೊಳ್ ಮುಗಿದಿರ್ಪುದೊಂದು ಕ-
ಲ್ಪದ ಕಜ್ಜಂ. ಸಿದ್ಧಿಯಿಂ ಬಹ ಪುಣ್ಯಮೇ ಗಂಗೆ,
ಸಾಧನೆಯು ಪಾಪಕ್ಕೆ!

ದ್ರೌಪದಿ— ಲೇಸನುಸಿರ್ದಯ್, ಭೀಮಸೇನ.
ವೀರರ್ಗೆ ಕ್ಲೈಬ್ಯಂ ತಕ್ಕುದಲ್ತು.
ಕೊಂದ ಮೇಲಿಂ ನೊಂದೊಡೇಂ?

[ರಣರಂಗದಲ್ಲಿ ಬಿದ್ದು ಸಾಯುತ್ತಿರುವ ಅನಾಮಧೇಯ ಸೈನಿಕನೊಬ್ಬನು "ಅಯ್ಯೋ ನೀರು!" ಎಂದು ಕೂಗಿಕೊಳ್ಳುವನು.]

ಧರ್ಮರಾಯ—(ಅಕಡೆ ನೋಡಿ) ಆವನದು ಆರ್ತಧ್ವನಿ?

ಭೀಮ— ಆವನೋ ಸಾಯುತಿಹ ರಣದಾಳು ಕೂಗುವಂ!

ಧರ್ಮರಾಯ—ಮನುಜಂ ನರಳುತಿರೆ ಮನುಜಂ ಸಂತವಿಸೆ
ಮನುಜಂ ದೇವಂ ತಾನಾದಪಂ. ಇಲ್ಲದಿರೆ
ಮನುಜಂ ದನುಜಂ. (ಧರ್ಮರಾಯನು ಸೈನಿಕನ ಬಳಿ ಹೋಗಿ ಮೊಳಕಾಲೂರುವನು.)

ಸೈನಿಕ— (ಒರಲುತ್ತ) ಅಯ್ಯೋ ನೀರು!

ಧರ್ಮರಾಯ—ಅರ್ಜುನಾ ಪೋಗಿ ಬೇಗದಿಂದುದಕಮಂ
ಕೊಂಡು ಬಾ. (ಅರ್ಜುನನು ಹೋಗುವನು.)

ಭೀಮ— (ದೂರದಿಂದಲೇ) ಅಗ್ರಜಾ, ಮೊದಲವನಾರವಂ?
ಕೇಳದಂ! ನಮ್ಮವನೊ? ಕೌರವನ ಪಡೆಯವನೊ?

ಧರ್ಮರಾಯ—ಭೀಮಸೇನ,
ಈಗಳಾದರು ನೀನು ವೈರಮಂ ಬಿಟ್ಟುಕಳೆ.
ಮಸಣದೊಳು, ಮರಣದೊಳು ಆರಾದರಾರವರು?
ಎಲ್ಲರುಂ ಜವನವರು! ನಮ್ಮವರು, ನಿಮ್ಮವರು
ಎಲ್ಲರುಂ ಅವನವರು! ಇಂತಿರಲು ನೀನೇಕೆ
ನಿಷ್ಕರುಣೆಯಿಂದಾಡುತಿಹೆ. ಪಗೆಯುಂ, ಕೆಳೆಯುಂ,
ಪೇರಾಸೆ, ಮಚ್ಚರಂ, ಹೋರಾಟಮಿವೆಲ್ಲಂ
ಸ್ವರ್ಗದ ಸುನೀಲ ಔದಾರ್ಯದೊಳು ಮುಳುಂಗಿ
ತಲ್ಲೀನಮಾದಪವು ತುತ್ತತುದಿಗೆ!

ಭೀಮ— (ದ್ರೌಪದಿಗೆ) ಕೃಷ್ಣೇ,
ಕೇಳ್ದಿಯೇಂ ಅಗ್ರಜನ ನುಡಿಗಳಂ. ನಿಷ್ಕರುಣಿ
ನಾನಂತೆ. ತಾವೆಲ್ಲರುಂ ಮಹಾಕರುಣಿಗಳು!
ಸಮರದೊಳು ಗದೆಯುಂ ಬಿಸುಟ್ಟಾನು ಕರುಣೆಯಂ
ಕೈದುಮಾಡಿರ್ದೊಡೆ ಇವರ್ಗಾವ ಗತಿಯಿತ್ತು?

ಧರ್ಮರಾಯ—ಕಟ್ಟಕಡೆಯೊಳು ಕರುಣೆಯೇ ನಮಗೆ ಶರಣಂ!
ದಯೆ ಎಂಬುದಾ ಸಚ್ಚಿದಾನಂದಮಾಗಿರ್ಪನ
ಮಾರ್ಗೊಳಪಲ್ತೆ? ಅನುಜ, ನೀನರಿಯೆಯಾ!
ಬಾನಿನಿಂ, ಮುಗಿಲ ಮನೆಯಿಂ, ಮೇಣು ಸಗ್ಗದಿಂ-
ದೈತರ್ಪ ಹೂವುಗಳ ಸೋನೆ ಮಳೆಯಂದದೊಳು
ಕರುಣೆ, ಪೇರಿರ್ದೆಗಳಿಂದೊಯ್ಯನಿಳಿತಂದಪುದು.
ರಾಜಕರವಾಲಕಿಂತಲುಂ ಕರ್ಕಶಂ ಕರುಣೆ;
ಶತ್ರುಗಳನೊಲಿಸುವುದು ಮಿತ್ರರಂ ಮಾಡಿ.
ಭಗವಂತನೆರ್ದೆಗಿಂತಲುಂ ಕೋಮಲಂ ಕರುಣೆ;
ಪರಮಾತ್ಮನೆರ್ದೆಯನೇ ಸೂರೆಗೊಂಬುದಲ್ತೆ?
ಕೊಡುವವನ ಹರಸುವುದು; ಕೊಳ್ಳುವನ ಸಲಹುವುದು!
ಕರುಣೆಯೆಂಬೈಶ್ವರ್ಯಂ ಅಳಿದೊಡಂ ಉಳಿದೊಡಂ,
ಪೋದೊಡಂ ಬಂದೊಡಂ ಪಡೆದವನದಾವಗಂ
ಶ್ರೀಮಂತನಾಗಿರ್ಪಂ! ಪಡೆದು ಕೊಡುವರ್ಗೆ ಅದು
ಮುಕ್ತಿಗೆ ಮಹಾದ್ವಾರಂ; ಮೇಣೀಸಿಕೊಂಬರ್ಗೆ
ಸ್ವರ್ಗಕ್ಕೆ ಸೋಪಾನಂ!

ಭೀಮ— (ಸ್ವಗತ) ಮುಂ ಪಲರ್ಮೆ
ಕೇಳಿರ್ದೆ ನಾನಿದಂ!

[ಅರ್ಜುನನು ನೀರು ತರುವನು. ಧರ್ಮರಾಯನು ಸೈನಿಕನಿಗೆ ನೀರು ಕುಡಿಸುವನು. ಸೈನಿಕನು ನಿಟ್ಟುಸಿರೆಳೆದು ಕಣ್ದೆರೆದು ನೋಡಿ]

ಸೈನಿಕ— ಯಾರಿವರು? ಪಾಂಡವರೆ! ಅಯ್ಯೋ,
ಕೌರವಸ್ವಾಮಿಯೊಳು ಅಪರಾಧಮೆಸಗಿದೆನೆ
ತುತ್ತತುದಿಯೊಳು ಪಾಂಡವರ ಕೈನೀರನೀಂಟೆ?
ಮನ್ನಿಸೆನ್ನಂ ಪ್ರಭೂ! ಮನ್ನಿಸಯ್! ಮನ್ನಿಸಯ್!

(ಸಾಯುವನು)

ಭೀಮ— ಈತನೀಗಳೆಸಗೆ ಮೆಚ್ಚಿನ ಬೀರನ್!
ಬಾಳಿನೊಳೆಂತುಟೋ ಅಂತೆಯೇ ಸಾವಿನೊಳುಂ
ನೋವಿನೊಳುಂ ಎರ್ದೆಗಿಡದೆ ಪಗೆಯಂ ಸಾಧಿಪನೆ
ಸಹಜ ವೀರನ್! ಮಿಕ್ಕವರ್ ಕೃತ್ರಿಮದ ವೀರರ್!

[ದೃಶ್ಯ ಕಣ್ಮರೆಯಾಗುವುದು.]

---

# ದೃಶ್ಯ ೬

[ವೈಶಂಪಾಯನ ಸರೋವರದ ತೀರ. ಕತ್ತಲೆ ಕವಿದುಕೊಂಡಿದೆ. ಮೇಲೆ ವಿಶಾಲವಾಗಿ ಹಬ್ಬಿರುವ ನೀಲಿಮಾ ವಿತಾನದಂತೆ ತೋರುವ ದ್ವಾಪರಯುಗದ ಆಕಾಶವು ದ್ವಾಪರಯುಗದ ನಕ್ಷತ್ರಗಳಿಂದ ಖಚಿತವಾಗಿದೆ. ಸರೋವರದ ಸುತ್ತ ಕೆಲವು ದಿಕ್ಕುಗಳಲ್ಲಿ ಕುರುಕ್ಷೇತ್ರ ಶ್ಮಶಾನದ ಕರಾಳ ದೃಶ್ಯವಿದೆ, ಆ ಸರೋವರದ ತೀರದಲ್ಲಿ ಕೌರವೇಂದ್ರನು ಊರುಭಂಗ ಕಿರೀಟಭಂಗವಾಗಿ ನೋವಿಗೂ ಅವಮಾನಕ್ಕೂ ವಿಷಾದಿಸುತ್ತ ಬಿದ್ದಿದ್ದಾನೆ. ಅಷ್ಟಾದಶಾಕ್ಷೋಹಿಣೀ ಪತಿಯೂ ಚಕ್ರವರ್ತಿಯೂ ಆದ ಆತನು ಅಲ್ಲಿ ದೇಸಿಗನಂತೆ ಹೊರಳುತ್ತಿದ್ದಾನೆ. ಆತನೆದುರು ಇದ್ದರೂ ಇಲ್ಲದವನಂತೆ ಅಶ್ವತ್ಥಾಮನು ಗಗನದೆಡೆಗೆ ನೋಡುತ್ತ ನಿಷ್ಪಂದನಾಗಿ ಕಂಬಸಿದುಂಬಿ ನಿಂತಿದ್ದಾನೆ.]

ಕೌರವ— (ವಿಷಾದದಿಂದಲೂ ನಿರಾಶೆಯಿಂದಲೂ)

ಪೋಗು, ನಡೆ, ಅಶ್ವತ್ಥಾಮ! ಆರಿರ್ದೊಡೇಗೈವರ್?
ತನಗೆ ತಾನಲ್ಲದಾರಾಗುವರು ಆಳ್ಗೆ?
ನಡೆ, ಪೋಗು; ಒಂಟಿಯಾಗೈತಂದವಂ ನಾಂ
ಒಂಟಿಯಾಗಿಲ್ಲಿಂದೆ ತೆರಳ್ದಪೆಂ. ನಡೆ, ಪೋಗು!

[ಅಶ್ವತ್ಥಾಮನು ಮಾತಾಡದೆ ಕೌರವನಿಗೆ ಕೈಮುಗಿದು ನಿಧಾನವಾಗಿ ಹೋಗಿ ಮರೆಯಾಗುವನು. ಕೌರವನು ಮರಳಿ ಏನನ್ನೋ ಆಲೋಚಿಸಿ ಕರೆಯುವನು.]

ಕೌರವ— ಗುರುಪುತ್ರಾ! (ಅಶ್ವತ್ಥಾಮನು ಬಂದು)

ಅಶ್ವತ್ಥಾಮ— ಕೌರವೇಂದ್ರಾ, ಇದೊ ಬಂದೆಂ.

ಅರುಹು ಬೆಸನೇನಿಹುದು; ಮಾಳ್ಪೆನೆಲ್ಲಮಂ.
ತುತ್ತತುದಿಯಾಕಾಂಕ್ಷೆ ಏನಿರ್ದೊಡಂ ಪೇಳ್,
ಗುರಿತಪ್ಪದೆಸಗುವೆಂ!

ಕೌರವ— ಆಕಾಂಕ್ಷೆ! ಆಕಾಂಕ್ಷೆ!

ಸುಡುಗಾಡಿನಾಕಾಂಕ್ಷೆ! ಇದನೊಂದನಾದರುಂ
ಬೆಮೆಗೊಳ್ಳದೆಸಗುವೆಯಾ?

ಅಶ್ವತ್ಥಾಮ— ಋಣಪಿಂಗಲೆಸಗುವೆಂ.

ಕೌರವ— (ಮರುಗುವ ದನಿಯಿಂದ)

ಕರ್ಣನಂ ಎನ್ನೊಡನೆ ಚಿತೆಯಲ್ಲಿ ಬೇಳ್ದಪೆಯಾ?
ನಾವಿರ್ವರೊಂದಾಗಿ ಭೂಮಿಯೊಳು ಬಾಳಿದೆವು;
ನಾವಿರ್ವರೊಂದಾಗಿ ಸಾಮ್ರಾಜ್ಯವಾಳಿದೆವು;
ಸಾವಿನೋಳಿರ್ವರುಂ ಒಂದಾಗಿ ನಲಿಯುವೆವು.
ಸೂಡಿನೊಳುಂ ನಾವಿರ್ವರೊಂದಾಗಲೆಳಸುವೆಂ!
ನಮ್ಮಿರ್ವರಾ ಬೂದಿ ಎರಡರಿಯದಂತಿರ್ಕೆ!
ಇದನೊಂದನಾದರುಂ ಬೆಮೆಗೊಳ್ಳದೆಸಗುವೆಯಾ?

ಅಶ್ವತ್ಥಾಮ —ರಾಜಾಜ್ಞೆ, ಪೋಗಿಬರ್ಪೆಂ. (ಹೋಗುವನು)

ಕೌರವ— ನಿಮ್ಮೆಲ್ಲರಂ ನಂಬಿ ಮೋಸವೋದೆಂ!
ಓ ಪಿತಾಮಹ ಭೀಷ್ಮ, ಓ ಗರುಡಿಯಾಚಾರ್ಯ,
ನೀವೆಲ್ಲರೆನ್ನ ಕಡೆಯವರಲ್ತೆ?
ತನುವನೆನಗಿತ್ತು ಮನಮನವರ್ಗಿತ್ತು
ಜೋಳದ ಪಾಳಿಗೋಸುಗಮೆ—
ಎನ್ನಮೇಲಣಭಿಮಾನದಿಂದಲ್ತು, ನಾಂ ಬಲ್ಲೆನದಂ—
ಬರಿಯ ಜೋಳದ ಪಾಳಿಗೋಸುಗಮೆ
ಎನ್ನ ಪಕ್ಷದಿ ನಿಂತು ತೋರ್ಕೆಗೆ ಪೊಣರ್ದಿರಲ್ತೆ?
ನೀವೆಲ್ಲರೆರ್ದೆಮುಟ್ಟಿ, ಮನಮುಟ್ಟಿ ಕಾದಿರ್ದೊಡೆ
ಎನಗಾಗುತಿರ್ದುದೇ ಈ ಪರಾಭವಂ,
ಈ ಅಪಮಾನಂ, ಈ ಊರುಭಂಗಂ?
ಪುಸಿನೆವಗಳೊದಗಲೊಡನೆಯೆ ಜಾರಿದಿರಿ!
ಧರ್ಮದ ಮುಸುಗಂ ತೊಟ್ಟು ಕೈತವಂ ತೋರಿದಿರಿ!
ಓ ಎನ್ನ ನಚ್ಚಿನ ಸೋದರ! ದುಶ್ಶಾಸನ;—
ಓ ಕೆಳೆಯಾ, ಓ ಕರ್ಣಾ—ಆರದು?

[ದ್ವಾಪರನು ಪ್ರವೇಶಿಸುವನು.]

ದ್ವಾಪರ—ಚಕ್ರವರ್ತಿ!

ಕೌರವ— (ವಿಕಟಹಾಸದಿಂದ) ಆರವರು, 'ಚಕ್ರವರ್ತಿಯಂ' ಕರೆಯುವರು?

ದ್ವಾಪರ—ಕುರುಕುಲ ಸಾರ್ವಭೌಮ, ನಾನಿದೋ ದ್ವಾಪರಂ!

ಕೌರವ— ದ್ವಾಪರ ಮಹಾನುಭಾವ, ಆಸ್ಥಾನಮೆನಗಿಲ್ಲ ನಿನ್ನಂ ಪೀಠ ದೊಳು ಕುಳ್ಳಿರಿಸೆ! ಅದರಿಂದಂ ಕ್ಷಮಿಸು!

ದ್ವಾಪರ—ರಾಜೇಂದ್ರ, ಮಣಿಯದೆಯೆ ಬಾಳ್ವ ನರನೆರ್ದೆಯೆ ಮಹಾ ಸ್ಥಾನಂ ಸ್ವಾತಂತ್ರ್ಯಮೇ ಸಾಮ್ರಾಜ್ಯಮಲ್ತೆ? ಸ್ವತಂತ್ರಿಗಿಂ ಮಿಗಿಲಪ್ಪ ಚಕ್ರವರ್ತಿಗಳಿನ್ನೊಳರೆ? ನೀ ನಾವಗಂ ಚಕ್ರವರ್ತಿ.

ಕೌರವ— ಯುಗಪುರುಷ, ನೀನ್ನೈತಂದ ಕಜ್ಜಮೇಂ?

ದ್ವಾಪರ—ಎನ್ನಾಳ್ಕೆ ಕೊನೆಗಂಡುದಿಂದಿಂಗೆ. ನಿನ್ನಾಣತಿಯಂ ಪಡೆದು ಬೀಳ್ಕೊಳ್ಳೆ ಬಂದಿಹೆಂ.

ಕೌರವ— ಅದರ್ಕೆನ್ನನೇಂ ಕೇಳ್ವುದು? ಪಾಂಡವರಿರ್ಪರ್! ಧರ್ಮ ರಾಯನಿರ್ಪಂ! ಆ ಕೃಷ್ಣನಿರ್ದಪಂ! ಈಗಳವರಲ್ತೆ ಚಕ್ರವರ್ತಿಗಳ್?

ದ್ವಾಪರ—ನೀನಿರ್ಪನ್ನೆವರಂ ಮಿಕ್ಕವರು ಸಾರ್ವಭೌಮರೆಂತಪ್ಪರು? ಎನಗೆ ನೀನೆ ಸಾರ್ವಭೌಮಂ! ಎನಗೆ ನೀನೆ ಚಕ್ರವರ್ತಿ! ನೀನೆನಗಿನ್ನುಂ ಕೌರವಕುಲೇಂದ್ರಂ! ಬೀಳ್ಕೊಳ್ಳುವೆಂ, ದಯಪಾಲಿಸಾಜ್ಞೆಯಂ. ಆಗಳೆಯೆ ಕಲಿಗಿತ್ತೆನಧಿಕಾರಮಂ. ಪೋಗಿ ಬರಲೇಂ?

ಕೌರವ— ಪೋಗಿಬಾ, ದ್ವಾಪರದೇವ. ನಾನುಂ ಪೋಗಿ ಬರ್ಪೆಂ.

ದ್ವಾಪರ—ಅಂತಕ್ಕೆ; ನಾಮಿರ್ವರಿನ್ನೊಮ್ಮೆ ಸೇರುವಂ. (ಹೋಗುವನು)

ಕೌರವ— ಅಂತಲ್ಲದಿನ್ನೇಂ?
ನಾಮೆಲ್ಲರುಂ ಮರಳಿ ಬರಲ್ಕೆಂದೆ ಪೋಪವರು!
(ಸ್ವಲ್ಪ ಹೊತ್ತು ಮೌನವಾಗಿದ್ದು ಉದ್ರೇಕದಿಂದ)

ಧರ್ಮಂ! ಅಧರ್ಮಂ!
ಧರ್ಮಿಗಳಾರ್? ಅಧರ್ಮಿಗಳಾರ್?
ಆಹಾ, ಧರ್ಮಸಂಸ್ಥಾಪಕನಲ್ತೆ ಆ ಕೃಷ್ಣಂ!
ಧರ್ಮಕ್ಕೆ ಬೆಂಗೊಟ್ಟು ಪೊರೆದನಲ್ತೆ, ಆ ಕೃಷ್ಣಂ?
ಆ ಬಡ ಗೋಪಂ!
ಆ ಪಚ್ಚಪಸಿಯ ತುರುಕಾರಂ!
ಅಸಂಸ್ಕೃತಂ, ಅನಾಗರಿಕಂ!—
ಇರ್ಕೆ,—
ನಾನಂತುಂ ಅರಗುಲಿ, ಇರ್ಕೆ.
ಪಾಂಡವರೊ?
ಅದಾವ ಧರ್ಮಮಂ ಪಿಡಿದರ್?
ಮುದುಕನಂ ಭೀಷ್ಮನಂ ಬೇಡಿ ಕೊಂದರಾ;
ಒಳಸಂಚುಗಳಂ ನಡೆಸಿ ಕಡೆಗಾಣ್ಬಿದರ್!
ಎಮ್ಮೆಲ್ಲರ್ಗಮಾಚಾರ್ಯಂ, ಆ ದ್ರೋಣನಂ
ಛದ್ಮನೆಯಿಂದೆ ಪರಲೋಕಕಟ್ಟಿದರ್!
ಕರ್ಣನಂ—(ಮರುಗುವನು)
ಆ ಎನ್ನ ನಚ್ಚಿನ ಕರ್ಣನಂ,
ಬರ್ದಿಲರುಂ ಪೂಜಿಸುವ ಆ ಸೂರ್ಯಪುತ್ರನಂ,
ಕಂಡಂತೆ ಕಣ್ಣೆದುರೊಳೆ ಕೈತವದಿ ಕೊಂದರ್!
ಎನ್ನನುಂ ಮಲ್ಲಗಾಳೆಗಕೆ ತಗದ ರೀತಿಯೊಳೆ
ತೊಡೆಯುಂ ಪೊಯ್ದು ಕೆಡಪಿದರ್.—
ಇವರೆಲ್ಲರುಂ ಧರ್ಮಿಗಳ್!
ನಾನೊರ್ವನೆ ಅಧರ್ಮಿ!
ಇದೆಲ್ಲಂ ಆ ಕೃಷ್ಣನ ಕುಹಕಂ!
ಕೈತವದ ಶಿಕ್ಷಾಗುರುವಲ್ತೆ ಆತಂ?—(ಕೋಪದಿಂದ)
ಎಲವೋ ಕೃಷ್ಣಾ! ಕೃಷ್ಣಾ! ಕೃಷ್ಣಾ!

[ಕೃಷ್ಣನು ಫಕ್ಕನೆ ಪ್ರತ್ಯಕ್ಷನಾಗುವನು]

ಕೃಷ್ಣ—ರಾಜೇಂದ್ರ, ಬಂದೆನಿದೋ!

[ಕೌರವನು ನಸುತಲೆಯೆತ್ತಿ ನೋಡಿ ಸಂಶಯ ದೃಷ್ಟಿಯನ್ನು ಬೀರಿ]

ಕೌರವ— ನೀನಾರಯ್?

ಕೃಷ್ಣ— ನೀನೀಗಳೆ ಕರೆದಾ ಕೃಷ್ಣಂ!

[ಕೌರವನ ಮುಖವು ವಿಕಟ ಕರ್ಕಶವಾಗುವುದು. ಔಡುಗಚ್ಚುವನು. ಬುಸುಗುಟ್ಟುವನು. ಸರ್ಪವು ಹೆಡೆಯೆತ್ತುವಂತ ಅರ್ಧ ಮೇಲೆದ್ದು ಕೈಮೇಲೆ ಒರಗುವನು.]

ಕೌರವ— ಆರೊ ಕರೆದರ್ ನಿನ್ನಂ? ಎನ್ನ ಕೇಳ್ಡೆಸೆಯುಂ ಕಂಡು ನಗಲ್ಕೆಂದೈತಂದೆಯೇಂ?

ಕೃಷ್ಣ— (ಮುಗುಳ್ನಗೆಯಿಂದ) ಕೌರವೇಂದ್ರಾ, ನೀನೆನ್ನಂ ಪೆಸರಂ ಕೂಗಿ ಕರೆದೆಯಲ್ತೆ?

ಕೌರವ— ಕೂಗಿದೆನೊ, ಕರೆದೆನಲ್ತು! ನೀಂ ಗೈದ ಕಪಟಮಂ ನೆನೆ ನೆನೆದು ಸಿಗ್ಗಿನಿಂ ಹೊಡೆಯುರಿಯಿಂ ಕೂಗಿದೆನೊ! ಕರೆದ ನಲ್ತು! "ಕೃಪಾಕರ, ಮುರಾರಿ, ಕರುಣಾಸಾಗರ, ಬಾ, ಪೊರೆಯಯಾ" ಎಂದೀ ಮಹಾನುಭಾವನಂ ಮೊರೆದು ಕರೆದೆನಲ್ತು!—ಬಂದ ಬಟ್ಟೆಯೊಳೆ ಮರಳೋ! ತೊಲಗಿಲ್ಲಿಂ ನೀಚ! ನಿಲ್ಲದಿರ್ ನನ್ನೆದುರ್! ತೊಲಗೋ, ಕಣ್ ಬೇನೆ ಬರ್ಕುಂ!

ಕೃಷ್ಣ— ಸಾವಧಾನಂ! ಚಕ್ರವರ್ತಿ, ಸಾವಧಾನಂ!

ಕೌರವ— ಎಲವೋ ದುರಾತ್ಮಾ, ಚಕ್ರವರ್ತಿ ಎಂದೆನ್ನಂ ಹಂಗಿಪೆ ಯೇಂ? ಎನ್ನ ಚಕ್ರಾಧಿಪತ್ಯಮಂ ಪಾಳ್ಗೆಯ್ದ ಕೇಡಿಗಂ ನೀನಲ್ತೆ?

ಕೃಷ್ಣ— ರಾಜೇಂದ್ರ, ಪಾಳ್ಗೆಯ್ದ ಕೇಡಿಗಂ ನಾನಲ್ತು;
ನೀನೆ ನಿನ್ನಂ ಕೇಡಿಗೀಡುಮಾಡಿದೆಯಲ್ತೆ?
ಮಚ್ಚರದಿ ಪಾಂಡುಸುತರಂ ಜೂದಿನ ವ್ಯಾಜದಿಂ
ಮೋಸದಿಂದಡವಿಗಟ್ಟಿದ ಪಾಪಿ ನಾನಲ್ತು.
ದ್ರೌಪದಿಯ ಮಾನಮಂ ರಾಜಸಭೆಯೊಳು ನೆರೆದ
ಮಹಾಜನಗಳೆದುರಿನೊಳೆ ಭಂಗಿಸಿ, ಧರ್ಮಮಂ
ಕೆಣಕಿದವನಾನಲ್ತು. ಪಾಂಡುಸುತರಿಗೆ ನೆಲವಮಂ
ಕೊಡು ಎಂದು ನಾಂ ಬಂದು ಬೇಡೆ ಕಿವುಡುಗೇಳ್ದು,
ಹಿರಿಯರೊಳ್ನುಡಿಗಳಂ ಕಡೆಗಣ್ಚಿ ಸಮರಮಂ
ಪೊತ್ತಿಸಿದವನಾನಲ್ತು. ನೀನೆ ಕಾರಣಂ!
ನಿನ್ನಿಂದಲೇ ಈ ಕುರುಕ್ಷೇತ್ರ ರಣರಂಗಂ
ನೋಡೀಗಳೆಂತು ರುದ್ರಭೂಮಿಯಾಗಿರ್ಪುದು!
ನಿನ್ನಿಂದಲೇ ಕರ್ಣ ಭೀಷ್ಮ ದ್ರೋಣಾದಿಗಳ್,
ದ್ವಾಪರ ಯುಗದ ಅನರ್ಘ್ಯ ರತ್ನಂಗಳ್, ನುಚ್ಚಿಳ್ದು
ಪೋಗಿರ್ಪವೈಸೆ?

ಕೌರವ— (ಉಕ್ಕುವ ಸಿಟ್ಟಿನಿಂದ) ಓ ಮಾರಿ! ಮಾಯಾವಿ!
ಎಲವೊ ಕೊಲೆಪಾತಕಾ! ರಣರಕ್ತ ರಾಕ್ಷಸಾ!
ಗಳಪದಿರ್ ಎನ್ನೆದುರೀ ತಿಕ್ತವಾಕ್ಯಂಗಳಂ!
ಎಲವೋ ಮಸಣಗಾಹಿ, ನಾನಲ್ತೆ ಕೊಂದವಂ?
ನಾನಲ್ತೆ ಪೆರ್ಬ್ಬಡೆಯ ಬೀರರ್ಕಳಂ ತಿಂದ
ಪೆಣದಿನಿಯು! ಇರ್ಕೆಲದ ಸುಭಟರ್ಕಳೆಲ್ಲರಂ
ಅಸುವೀಂಟಿ ಸುಡುಗಾಡುಗೈದವಂ ನಾನಲ್ತೆ?—
ಓ ಹುಟ್ಟು ನೆತ್ತರುಣಿ, ನೀನಂದು ವಿದುರನ
ಬೀಡಿನಿಂದೆನ್ನ ಆಸ್ಥಾನಕ್ಕೈತಂದಾಗಳೆ
ಪಜ್ಜೆಪಜ್ಜೆಗುಂ ಸೂಡುಗಳನೊಟ್ಟಿ, ಮಸಣಮಂ

ಗೈಯುತ್ತೆ ಬಂದೆಯಲ್ತೆ? ಕಪಟಮಂ ಮರೆಮಾಡಿ
ಗೆಳವುವೆಯಾ ಎನ್ನೊಡನೆ? (ಬುಸುಗುಟ್ಟುವನು)

ಕೃಷ್ಣ— (ಗಂಭೀರನಾಗಿ ತನ್ನಲ್ಲಿಯೇ) ಸಾಲ್ಗುವಿಾಯಾಟಂ!
ಕನಸನೊಡೆಯುವ ಪೊಳ್ತು ಬಳಿಸಾರಿರ್ಪುದು.
ಮಾಯಾಮೋಹಂ ಎನಿತು ಕುರುಡುಗೈವುದು ಜಗಮಂ!

[ಕೌರವನನ್ನು ನಟ್ಟನೋಟದಿಂದ ದುರದುರನೆ ನೋಡಿ, ಎರಡು ಹಜ್ಜೆ ಮುಂದರಿದು ಶಕ್ತಿಯನ್ನು ಸೂಸುವ ದಿವ್ಯವಾಣಿಯಿಂದ ಹೇಳುವನು.]

ವೀರ ಕೌರವಾ! ತತ್ತ್ವಜ್ಞಾನಿ ಕೌರವಾ!
ಸಾಲ್ಗುವಿಾ ಅಭಿನಯಂ! ಹೊಂಗನಸನೊಡೆದೇಳು!
ಎಚ್ಚೆತ್ತು ಕಣ್ದೆರೆದು ನೋಡು! ನೋಡಯ್!
ಆಟಮಂ ಮರೆವರೇಂ ಮೂಢರಂತೆ?

[ಸಾಮಾನ್ಯ ಗುರುಗಳ ಶಕ್ತಿದಾಯಕ ಮಂತ್ರೋಪದೇಶದಿಂದ ಮಾಯೆಯ ಸ್ವಪ್ನವು ಒಡೆದು ಜ್ಞಾನೋದಯವಾಗುವುದು. ಎಂದಮೇಲೆ ಸರ್ವ ಜಗದ್ಗುರುವಾದ ಭಗವಾನ್ ಶ್ರೀಕೃಷ್ಣನ ಅಧಿಕಾರಯುಕ್ತವಾದ ಮಂತ್ರವಾಣಿಯಿಂದ ಆಸನ್ನವಿಮೋಚನನಾದ ಕೌರವನ ಸುವರ್ಣ ಸ್ವಪ್ನವು ಜಲಬುದ್ಬುದದಂತೆ ಸಿಡಿದೊಡೆಯುವುದು. ಇದ್ದಕ್ಕಿದ್ದಹಾಗೆ ಕೌರವನ ಮುಖದಲ್ಲಿ ಶಾಂತಿ ಮೈದೋರುವುದು; ಮುಗುಳ್ನಗೆ ಸುಳಿದಾಡುವುದು; ಕಣ್ಣರಳುವುದು. ನೀಳವಾಗಿ ನಿಟ್ಟುಸಿರೆಳೆದು ಪ್ರಸನ್ನಚಿತ್ತನಾಗಿ ಶ್ರೀಕೃಷ್ಣನನ್ನು ನೋಡುವನು. ಶ್ರೀಕೃಷ್ಣನೂ ಮುಗುಳ್ನಗುವನು. ಸೂತ್ರಧಾರನೂ ಕಥಾನಾಯಕನೂ ನಾಟಕರಂಗದಿಂದ ನೇಪಥ್ಯ ಮಂದಿರಕ್ಕೆ ಬಂದಂತಾಗುವುದು.]

ಕೃಷ್ಣ— ಸ್ವರ್ಣಸ್ವಪ್ನವನೊಡೆದೆಯಾ, ಕೌರವೇಂದ್ರಾ?
ಕೌರವ— (ಹಸನ್ಮುಖಿಯಾಗಿ) ಜಗದ್ಗುರು ನಿನ್ನ ಮಂತ್ರಾಘಾತದಿಂದೊಡೆ
ದುದಾ ಸ್ವಪ್ನಂ. (ಸುಯ್ದು) ಕಮಲಾಕ್ಷ, ಸ್ವರ್ಣಸ್ವಪ್ನಮಾ

## ದೃಶ್ಯ ೭

[ಮಸಣದೊಂದೆಡೆ. ಕೃಷ್ಣನೂ ವಿದುರನೂ ಮಾತಾಡುತ್ತಿರುವರು.]

ಕೃಷ್ಣ— ವಿದುರಾ, ಕೌರವೇಂದ್ರನಂ ಕಂಡುಬಂದೆಂ. ಏಂ ಪೌರುಷವಂತನಾತಂ! ಛಲದೊಳವಂಗೆಣೆಯಂ ಕಾಣೆಂ.

ವಿದುರ— ಮಹಾಧೀರಂ! ಅಚಲ ಪ್ರತಿಜ್ಞಂ! (ದೂರ ನೋಡಿ)—ಆರಲ್ಲಿ ಇತ್ತಲೈತರುತಿಹರ್?

ಕೃಷ್ಣ— (ನೋಡುತ್ತ) ಏಂ ಚಿತ್ರಮಯಂ ಈ ಶ್ಮಶಾನಂ!—ಸಹದೇವನಾತಂ!—ಕುಂತಿಯಲ್ಲವೆ ಆಕೆ?

ವಿದುರ— ಅಹುದೆಂದೇ ತೋರ್ದಪುದು. ಏನನೋ ಪುಡುಕುತಿರ್ಪಂತೆ ತೋರ್ಪುದಲ್ತೆ?

ಕೃಷ್ಣ— ಕೂಸಂ ತೊಟ್ಟಿಲಿಂ ತೆಗೆದೊಗೆದ ತಾಯಿ, ಮಸಣದೋಳ್ ಕಾಣಲ್ಕೆ ವಂದಿರ್ಪಳ್, ತನ್ನ ನಚ್ಚಿನ ಕುವರನಂ!

ವಿದುರ— (ಆಶ್ಚರ್ಯದಿಂದ) ನೀಂ ಪೇಳ್ವುದೇಂ? ಆರಂ ಕಾಣಲ್ಕೆ ಬಂದಿರ್ಪಳ್?

ಕೃಷ್ಣ— ಮತ್ತಾರಂ? ರಣಧೀರಂ, ದಾನಶೂರಂ ಕರ್ಣನಂ!

ವಿದುರ— ಕರ್ಣಂ! ಕುಂತಿಯ ಪುತ್ರಂ! ಏಂ ಮಾತಿದು, ಕೃಷ್ಣಾ?

ಕೃಷ್ಣ— ನೀನರಿದುದಿಲ್ಲ. ಮೇಲ್ಗತೆಯ ಎರ್ದೆಯೊಳೆನಿತು ಒಳಗತೆಗಳಾಡುತಿಹವೆಂಬುದಂ ನೀನರಿದುದಿಲ್ಲ. ಇತ್ತ ಬಾ, ಪೇಳ್ವೆನೆಲ್ಲಮಂ. ಆಲಿಸವರಾಡುತಿರ್ಪಾ ನುಡಿಗಳಂ.

ವಿದುರ— ಇಂದೇಂ ಆಶ್ಚರ್ಯದ ಮೇಲಾಶ್ಚರ್ಯಂ!

ಕೃಷ್ಣ— ಇಂದೆಲ್ಲರ್ಗಂ ಪಸುಗೆಯ ಪೊಳ್ತು. ಬಾ, ಕೆಲಸಾರ್ವಂ.

[ವಿದುರನೂ ಕೃಷ್ಣನೂ ಮರೆಯಾಗುವರು. ಸಹದೇವನೂ ಕುಂತಿಯೂ ಹೆಣಗಳನ್ನು ಪರೀಕ್ಷಿಸುತ್ತ ಬರುವರು.]

ಸಹದೇವ—ಇತ್ತಲಿತ್ತಲ್ ತಾಯೆ.

ಕುಂತಿ— ಮಗೂ, ಎಂತಹ ಬಸಿರೆನ್ನದು? ಅಂದು ಸುಡುಗಾಡಂ ಬೆಸಲೆಯಾದೀ ಬಸಿರ್, ಇಂದು ಸೂಡಿನ ಬೆಂಕೆಯಿಂ ಬೇಗುದಿಗೊಳ್ಳುತಿಹುದಲ್ಲಾ!

ಸಹದೇವ—(ತಿಳಿದೂ ತಿಳಿಯದವನಂತೆ) ತಾಯೇ, ನೀವಾರಂ ಇಂತುಟರಸು ವಿರಿ? ಪೇಳಲೊಲ್ಲಿರೇಂ ಎನಗಂ? ತಿಳುಪಿದೊಡಾತನಂ ಬೇಗದಿಂ ತೋರಲೆಳಸುವೆಂ. ನೀವರಸುವಂ ಪೆಸರಾಂತ ಬೀರನೋ? ಸಾಮಾನ್ಯ ಭಟನೋ?

ಕುಂತಿ— (ನಿಡುಸುಯ್ದು) ಪೆಸರಾಂತ ವೀರಂ, ಕಂದಾ. ನೆಲದರಿಕೆಯ ಕಲಿಯಾತಂ! ಕೀರ್ತಿಕಾಂತಿಯಿಂ ಸೂರ್ಯದೇವನಂ ಮೀರಿಹ ನಾತಂ! ರಣದೊಳು ರೋಷಭೀಷಣ ಕಲ್ಕಿಯಂತೋರ್ದ್ದ ನಾತಂ! ದಾನವಂ ಬಿಡುಗೈಯಿಂ ಬೀರಿದವನಾತಂ!

ಸಹದೇವ—ಆರದು? ದಾನಶೂರಂ ಕರ್ಣನೇಂ?

ಕುಂತಿ— (ಬಿಕ್ಕಿ ಬಿಕ್ಕಿ ಅಳುತ್ತ) ಅಹುದು, ಮಗೂ, ಕರ್ಣಂ! ಆ ಎನ್ನ ಕೌಮಾರ ಪ್ರಣಯದಿಂದೊಗೆತಂದ ಎನ್ನ ಕಣ್ಮಣಿ ಕರ್ಣಂ! ಪಿರಿಯ ಮಗಂ! ನಿಮಗೆಲ್ಲರಿಂ ಪಿರಿಯವಂ!

ಸಹದೇವ—(ಅಚ್ಚರಿಯಂ ನಟಿಸಿ) ತಾಯೇ, ನೀಂ ಪೇಳ್ವುದಿದೇಂ? ನಿಮಗೆ ಮಗನೆಂತು ಕರ್ಣಂ?

ಕುಂತಿ— ಅಯ್ಯೋ, ಮಗೂ; ನೊಂದ ಬಸಿರಂ ಕೆಣಕದಿರ್! ಎನ್ನೊಡಲೊಳ್ ನರಕಮನೆಬ್ಬಿರಿಸದಿರ್!—ತೋರಯ್, ಕರ್ಣನಂ ತೋರಯ್!

[ಸಹದೇವನು ಸ್ವಲ್ಪ ಮುಂದೆ ಹೋಗಿ ಕರ್ಣನ ದೇಹವನ್ನು ನೋಡಿ ಇನಿತಳುಕಿ ನಿಂತು ಕೈಬೆರಳಿಂದ ತೋರುವನು. ಕುಂತಿಯು ಗೋಳಿಡುತ ಕಳಚಿಕೊಂಡು ಬೀಳುವಳು ಕರ್ಣನ ಶವದ ಮೇಲೆ.]

ಸಹದೇವ—ಏಂ ಕರಾಳ ಲೀಲೆಯಿದು! (ತಲೆಗೊಡಹಿ ಧೀರವಾಗುವನು)

ದೊಡಂ ಏಂ ಭಯಂಕರ ಸ್ವಪ್ನಂ!—ಸೂತ್ರಧಾರ, ನಾನೆನ್ನ ಪಾತ್ರಮಂ ನೇರಮಾಗಭಿನಯಿಸಿ ತೋರ್ದೆನೇಂ? ಮೇಣದರೊಳೇನಾದರುಂ ತಪ್ಪಿದೆನೊ?

ಕೃಷ್ಣ— ನಟರೊಳ್ ನಟನೆಂದೊಡೆ ನೀನಲ್ತೆ, ಕೌರವಾ! ನಿನ್ನವೊಲಾರುಂ ಅಭಿನಯಚತುರರಿನ್ನಿಲ್ಲ. ಏನಭಿನಯಂ? ನಿನ್ನಭಿನಯಕೆ ನಾನೆ ಮಾರುವೋದೆಂ!

ಕೌರವ— ಕರ್ಣನಭಿನಯುವನೇನೆಂಬೆ? ಬಲು ಸೊಗಸಲ್ತೆ?

ಕೃಷ್ಣ— ನಿನಗೆರಡನೆಯವನಾತಂ! ಆ ದಿನಂ ಕಡೆಯ ಕಾಳೆಗದೊಳು ತನ್ನಂ ತಾನೆ ಮಿಾರ್ದನವಂ. ನೋಡಿ, ನೋಡುತ್ತೆ ನಾಂ ಬಲು ಹಿಗ್ಗಿದೆಂ.

ಕೌರವ— ನೀಂ ಕಲಾಕೋವಿದನಲ್ತೆ? ವಿಶ್ವಕವಿಯಲ್ತೆ? (ಮೇಲೆ ನೋಡಿ ಸ್ವಲ್ಪ ಆಶ್ಚರ್ಯದಿಂದ) ಭಗವನ್, ಎತ್ತ ಪೋದುದು ಆ ತಾರಾಪರಿಶೋಭಿತ ನೀಲಾಕಾಶಂ? (ಸುತ್ತನೋಡಿ) ಶ್ಮಶಾನಮಾಗಿರ್ದ ಆ ಕುರುಕ್ಷೇತ್ರ ರಣರಂಗಮೆಲ್ಲಿ? (ಕಿವಿಗೊಟ್ಟು ಆಲಿಸಿ) ಕಿರಿಬಿರಿಯುವಂತೇಳುತಿರ್ದ ಆ ಕ್ರಂದನ ಧ್ವನಿಗಳೆಲ್ಲಿ?

ಕೃಷ್ಣ— (ಹಸಿತವದನನಾಗಿ) ಕನಸೊಡೆದ ಮೇಲೆ ಅದರೊಳೇನಿಹುದು, ಕೌರವಕ್ಷ್ಮಾಪ್ನಾ? ಅದೆಲ್ಲಂ ಸವಿಸುಳ್ಳಿನಿಂ ಕೆತ್ತಿರುವ ಪುಸಿ ಸೊನ್ನೆಯಲ್ತೆ?—ಅದೋ!

[ಪರದೆಯೊಳಗೆ "ಸಂಜಯಾ, ದಾರಿ ತೋರು" ಎಂಬ ದನಿಯಾಗುವುದು.]

ಅದೋ, ಗಾಂಧಾರಿ ಧೃತರಾಷ್ಟ್ರರ್ ಸಂಜಯನೊಡಗೂಡಿ ಬರುತಿರ್ಪರೀಯೆಡೆಗೆ. ನಾಟಕಮಂ ನೇರಮಾಗಿ ಕೊನೆಗಾಣ್ಬು! ನಾಂ ಪೋಗಿ ಬರ್ಪೆಂ. (ನಡೆಯುತ್ತ) ಅಲ್ಲಿ ನಿನ್ನಂ ಮರಳಿ ಕಾಣುವೆಂ! (ಅದೃಶ್ಯವಾಗುವನು)

[ಕೌರವನು ಪುನಃ ಮಂಕು ಕವಿದವನಂತೆ ನೆಲದಮೇಲೆ ಬಿದ್ದು ನರಳುವನು. ಸಂಜಯು, ಧೃತರಾಷ್ಟ್ರ, ಗಾಂಧಾರಿ, ಭಾನುಮತಿ ಮೊದಲಾದವರು ಬರುವರು.]

ಕೌರವ— (ಹೊರಳುತ್ತ) ಹಾ, ಏನಪಮಾನಂ! ಅಯ್ಯೋ, ಏನೂರು ಭಂಗಂ; ಏನಪಮಾನಂ!

ಸಂಜಯು—ಧೃತರಾಷ್ಟ್ರ, ನೋಡೀಯೆಡೆಯೊಳೆ ಪೊರಳ್ದು ನೋಯು ತಿರ್ಪಂ, ಕುರುಕುಲ ಸಾರ್ವಭೌಮಂ.

ಧೃತರಾಷ್ಟ್ರ—ಅಪ್ಪಾ, ಮಗೂ, ಎಲ್ಲಿರ್ಪೆ?

ಗಾಂಧಾರಿ—ಅಯ್ಯೋ ಮಗೂ!

ಭಾನುಮತಿ—ಅಯ್ಯೋ! ಅಯ್ಯೋ!!

[ಎಲ್ಲರೂ ಕೌರವನ ಮೇಲೆ ಬಿದ್ದು ಗೋಳಾಡುವರು. ಆ ಭಯಂಕರ ವಾದ ಶ್ಮಶಾನ ಮೌನದಲ್ಲಿ ಆ ರೋದನ ಧ್ವನಿಯು ಕಡಲ ಮೊರೆಯಾಗಿ ಹಬ್ಬುವುದು.]

---

## ದೃಶ್ಯ ೭

[ಮಸಣದೊಂದೆಡೆ. ಕೃಷ್ಣನೂ ವಿದುರನೂ ಮಾತಾಡುತ್ತಿರುವರು.]

ಕೃಷ್ಣ— ವಿದುರಾ, ಕೌರವೇಂದ್ರನಂ ಕಂಡುಬಂದೆಂ. ಏಂಪೌರುಷವಂತನಾತಂ! ಛಲದೊಳವಂಗೆಣೆಯಂ ಕಾಣೆಂ.

ವಿದುರ— ಮಹಾಧೀರಂ! ಅಚಲ ಪ್ರತಿಜ್ಞಂ! (ದೂರ ನೋಡಿ)—ಆರಲ್ಲಿ ಇತ್ತಲೈತರುತಿಹರ್?

ಕೃಷ್ಣ— (ನೋಡುತ್ತ) ಏಂ ಚಿತ್ರಮುಯಂ ಈ ಶ್ಮಶಾನಂ!—ಸಹದೇವನಾತಂ!—ಕುಂತಿಯಲ್ಲವೆ ಆಕೆ?

ವಿದುರ— ಅಹುದೆಂದೇ ತೋರ್ದಪುದು. ಏನನೋ ಪುಡುಕುತಿರ್ಪಂತೆ ತೋರ್ಪುದಲ್ತೆ?

ಕೃಷ್ಣ— ಕೂಸಂ ತೊಟ್ಟಿಲಿಂ ತೆಗೆದೊಗೆದ ತಾಯಿ, ಮಸಣದೋಳ್ ಕಾಣಲ್ಕೆ ವಂದಿರ್ಪಳ್, ತನ್ನ ನಚ್ಚಿನ ಕುವರನಂ!

ವಿದುರ— (ಆಶ್ಚರ್ಯದಿಂದ) ನೀಂ ಪೇಳ್ವುದೇಂ? ಆರಂ ಕಾಣಲ್ಕೆ ಬಂದಿರ್ಪಳ್?

ಕೃಷ್ಣ— ಮತ್ತಾರಂ? ರಣಧೀರಂ, ದಾನಶೂರಂ ಕರ್ಣನಂ!

ವಿದುರ— ಕರ್ಣಂ! ಕುಂತಿಯ ಪುತ್ರಂ! ಏಂ ಮಾತಿದು, ಕೃಷ್ಣಾ?

ಕೃಷ್ಣ— ನೀನರಿದುದಿಲ್ಲ. ಮೇಲ್ಗತೆಯ ಎರ್ದೆಯೊಳೆನಿತು ಒಳಗತೆಗಳಾಡುತಿಹವೆಂಬುದಂ ನೀನರಿದುದಿಲ್ಲ. ಇತ್ತ ಬಾ, ಪೇಳ್ವೆನೆಲ್ಲಮಂ. ಆಲಿಸವರಾಡುತಿರ್ಪಾ ನುಡಿಗಳಂ.

ವಿದುರ— ಇಂದೇಂ ಆಶ್ಚರ್ಯದ ಮೇಲಾಶ್ಚರ್ಯಂ!

ಕೃಷ್ಣ— ಇಂದೆಲ್ಲರ್ಗಂ ಪಸುಗೆಯ ಪೊಳ್ತು. ಬಾ, ಕೆಲಸಾರ್ವಂ.

[ವಿದುರನೂ ಕೃಷ್ಣನೂ ಮರೆಯಾಗುವರು. ಸಹದೇವನೂ ಕುಂತಿಯೂ ಹೆಣಗಳನ್ನು ಪರೀಕ್ಷಿಸುತ್ತ ಬರುವರು.]

ಸಹದೇವ—ಇತ್ತಲಿತ್ತಲ್ ತಾಯೆ.

ಕುಂತಿ— ಮಗೂ, ಎಂತಹ ಬಸಿರೆನ್ನದು? ಅಂದು ಸುಡುಗಾಡಂ ಬೆಸಲೆಯಾದೀ ಬಸಿರ್, ಇಂದು ಸೂಡಿನ ಬೆಂಕೆಯಿಂ ಬೇಗುದಿಗೊಳ್ಳುತಿಹುದಲ್ಲಾ!

ಸಹದೇವ—(ತಿಳಿದೂ ತಿಳಿಯದವನಂತೆ) ತಾಯೇ, ನೀವಾರಂ ಇಂತುಟರಸುವಿರಿ? ಪೇಳಲೊಲ್ಲಿರೇಂ ಎನಗಂ? ತಿಳುಪಿದೊಡಾತನಂ ಬೇಗದಿಂ ತೋರಲೆಳಸುವೆಂ. ನೀವರಸುವಂ ಪೆಸರಾಂತ ಬೀರನೋ? ಸಾಮಾನ್ಯ ಭಟನೋ?

ಕುಂತಿ— (ನಿಡುಸುಯ್ದು) ಪೆಸರಾಂತ ವೀರಂ, ಕಂದಾ. ನೆಲದರಿಕೆಯ ಕಲಿಯಾತಂ! ಕೀರ್ತಿಕಾಂತಿಯಿಂ ಸೂರ್ಯದೇವನಂ ಮೀರಿಹನಾತಂ! ರಣದೊಳು ರೋಷಭೀಷಣ ಕಲ್ಕಿಯಂತೋರ್ದನಾತಂ! ದಾನಮಂ ಬಿಡುಗೈಯಿಂ ಬೀರಿದವನಾತಂ!

ಸಹದೇವ—ಆರದು? ದಾನಶೂರಂ ಕರ್ಣನೇಂ?

ಕುಂತಿ— (ಬಿಕ್ಕಿ ಬಿಕ್ಕಿ ಅಳುತ್ತ) ಅಹುದು, ಮಗೂ, ಕರ್ಣಂ! ಆ ಎನ್ನ ಕೌಮಾರ ಪ್ರಣಯದಿಂದೊಗೆತಂದ ಎನ್ನ ಕಣ್ಮಣಿ ಕರ್ಣಂ! ಪಿರಿಯ ಮಗಂ! ನಿಮಗೆಲ್ಲರಿಂ ಪಿರಿಯವಂ!

ಸಹದೇವ—(ಅಚ್ಚರಿಯಂ ನಟಿಸಿ) ತಾಯೇ, ನೀಂ ಪೇಳ್ವುದಿದೇಂ? ನಿಮಗೆ ಮಗನೆಂತು ಕರ್ಣಂ?

ಕುಂತಿ— ಅಯ್ಯೋ, ಮಗೂ; ನೊಂದ ಬಸಿರಂ ಕೆಣಕದಿರ್! ಎನ್ನೊಡಲೊಳ್ ನರಕಮನೆಚ್ಚರಿಸದಿರ್!—ತೋರಯ್, ಕರ್ಣನಂ ತೋರಯ್!

[ಸಹದೇವನು ಸ್ವಲ್ಪ ಮುಂದೆ ಹೋಗಿ ಕರ್ಣನ ದೇಹವನ್ನು ನೋಡಿ ಇನಿತಳುಕಿ ನಿಂತು ಕೈಬೆರಳಿಂದ ತೋರುವನು. ಕುಂತಿಯು ಗೋಳಿಡುತ ಕಳಚಿಕೊಂಡು ಬೀಳುವಳು ಕರ್ಣನ ಶವದ ಮೇಲೆ.]

ಸಹದೇವ—ಏಂ ಕರಾಳ ಲೀಲೆಯಿದು! (ತಲೆಗೊಡಹಿ ಧೀರವಾಗುವನು)

ಕುಂತಿ— ಅಯ್ಯೊ, ಕಂದಯ್ಯ, ಏನಾಗಿ ಪೋಗಿರ್ಪಯ್ !
ಹೆತ್ತು ಹೊಳೆಗಿತ್ತ ನಿನ್ನಂ
ಸತ್ತ ಸುಡುಗಾಡಿನೊಳು ಮತ್ತೆ ಮುದ್ದಿಪಂತಾಯ್ತೆ?
ಕನ್ನೆತನದಾ ಲೀಲೆ ಕಣ್ಣನಿರಿವಂತಾಯ್ತು !
ನಿನ್ನನೀ ಪಾಡಿಗೀಡುಮಾಡಿದ ಪಾಪಿಯಂ
ಮನ್ನಿಸೈ.—ಗುರುದೇವ, ಗುರುದೇವ,
ಓ ದೂರ್ವಾಸ,
ನೀನಿತ್ತ ವರಂ ಪೆತ್ತ ಪಣ್ಣನಿದನೀಕ್ಷಿಸೈ !
ಕಣ್ದುಂಬಿ ಕಾಣಯ್
ನಿನ್ನ ಕಿಡಿಯುರುಪಿ ಮಸಣಂಗೈದ ತೋಂಟಮಂ!
ಭಾರತಮನಿಂತು ಮಸಣಮಂ ಮಾಡಲೆಂದೇ
ನಿನ್ನಂ ನಾಂ ಪೆತ್ತೆನಲ್ತೆ ?
ಓ ಎನ್ನೆದೆಯ ಮಗುವೇ,
ಓ ಎನ್ನ ಬಯಕೆಗಿಡಿಯೇ,
ಮರಳಿ ನೀನೆನ್ನ ಬಸಿರಿಂ ಬಾರೆಯಾ? ಪೇಳೈ !—
ಓ ಕಂದಾ, ನಿನ್ನ ಮಿತ್ರಂ ಕೌರವೇಂದ್ರನಲ್ತು
ನಾನೆ ಕಾರಣಮಲ್ತೆ ಈ ಮಾರಿಯೌತಣಕೆ,
ಈ ಕುರುಕ್ಷೇತ್ರ ಸಮರದೀ ಮಾರಿಯೌತಣಕೆ ?
ಓ ಗಂಗಾಮಾತೆ, ನಿರ್ಮಲಾಂತಃಕರಣೆ,
ನಾನಂದು ನಿನಗೆ ಕೈಯೆಡೆಯಿತ್ತ ಕಂದನಂ
ಇಂದು ಬಾರಾ, ನೋಡಾ, ಇಲ್ಲಿ ಏನಾಗಿರ್ಪಂ !
ಪಾಪಿಷ್ಠೆ ಪೆತ್ತೀತನಂ ಅಂದು ನೀಂ ಪೊರೆದೆ ;
ನೀನಿಂದುಂ ಪೊರೆಯಲಾರೆಯಾ, ಓ ಪುಣ್ಯಮಯೀ !—
ಮಗೂ, ಮಗೂ, ನಾಂಗೈದ ಮೊದಲ ತಪ್ಪಿಗೆ ಬಿದಿಯು
ನಿನ್ನನೇತರ್ಕೆ ಬೇಳ್ದುದಿಂತು ?

ಎನ್ನ ಪಾಪಕೆ ನಿನ್ನ ಜೀವನಂ ಬಲಿಯಾಯ್ತೆ?
ಅರುಸುಗಳ ಬಳಿಯೊಳೆ ಬಂದ ನಿನ್ನಂ ನಾಂ
ಸೂತಕುಲದೊಳು ತಿರುಗುವಂತೆಸಗಿದೆಂ;
ಮನ್ನಿಸೈ; ಅಪರಾಧಮುಂ ಮನ್ನಿಸೈ!—
ಓ ಕಂದಾ, ನೀನಂದು ಹಸ್ತಿನಾವತಿಯೊಳು,
ಪಾಂಡವರ್ ಕೌರವರ್ ಬಿಲ್ಬಿಜ್ಜೆಯಂ ಮೆರೆವ
ಪೊಳ್ತಿನೊಳ್, ನಿನ್ನ ಕೈ ಚಳಕಮುಂ ತೋರಲೆಂದು
ರಂಗಕ್ಕೈತಂದಾಗಳ್ ನಾಂ ನೋಡುತ್ತೆ ಹಿಗ್ಗಿದೆಂ;
ಎನ್ನ ತಪ್ಪಂ ನೆನೆದು ನಡುಗಿದೆಂ!
ನೆರೆದ ಬೀರರ್ ನಿನ್ನಂ ಸೂತಕುಲದವನೆಂದು
ತೆಗಳೆ, ನೀಂ ಮೊಗಮುನಿಳಿಕೆಗೈದಯ್!
ನಾನದಂ ಕಂಡೊಡನೆ ಮುಚ್ಛೆವೋದೆಂ.
ಆಗಳಾದೊಡಮಾಂ ನನ್ನಿಯಂ ಪೊರಗೆಡಪಿ
ಮರಳಿ ನಿನ್ನಂ ಪಡೆಯಬಹುದಿತ್ತು. ಆದೊಡಂ,
ಜನಪದದಪವಾದಂ ಬರ್ಕುಂ ಎಂಬ ಪುಸಿನಾಣಿನಿಂ
ಎರ್ದೆಯೊಳುರ್ಕಿದ ಮಗುವಿನಳ್ಕರಂ ಮಳ್ಗಿಸಿದೆಂ;
ಅಳಿಸಿದೆಂ! ಅಯ್ಯೋ ನಿನ್ನ ಬಾಳನಳಿಸಿದೆಂ!—
ಓ ಕೃಷ್ಣಾ, ನಿನ್ನ ನುಡಿಯಂ ಕೇಳ್ದು ಕೆಟ್ಟೆಂ!
ನನ್ನ ಮಗುವಂ ನಾನೆ ನುಲಿದು ಕೊಂದೆನಲ್ತೆ?
ಅಯ್ಯೋ ನಿನ್ನಾಣತಿಯನೆಸಗಲೆಂದುಜ್ಜುಗಿಸಿ
"ತೊಟ್ಟ ಸರಲಂ ಮರಳಿ ತೊಡದಿರು" ಎಂದು
ಸೂರುಳಂ ಗೈವಂತೆ ಮಾಡಿದೆಂ!
ನನ್ನ ಮಗುವಂ ನಾನೆ ಮಿಳ್ತುವಿಗೀಡುಮಾಡಿದೆಂ!
ಓ ಬಿದಿಯೆ, ಸುಡು ಎನ್ನ ತಾಯ್ತನಮುಂ!
ಮಗನೇ, ಅರಿಯದಬಲೆಯುನೆಲ್ಲರುಂ ಇಂತು

ವಂಚಿಸಿದರಲ್ತೆ! ನಿನ್ನಂ ಕೊಂದರಲ್ತೆ?
ನೀನುಂ ಇಂತೆನ್ನಂ ವಂಚಿಸಿ ಎತ್ತ ಪೋದಯ್?
ಓ ಪಾರ್ಥ, ಹೆತ್ತವಳ ಕಣ್ಣಿನಿಂತಿರಿವರೇಂ?
ಓ ಕಂದಾ! ಓ ಕರ್ಣಾ! ಅಯ್ಯೋ!

[ದೃಶ್ಯ ಬದಲಾಯಿಸುವುದು.]

---

# ದೃಶ್ಯ ೮

[ಮುದುಕಿ ಮಗನನ್ನು ಎಲ್ಲಿಯೂ ಕಾಣದೆ ಬಳಲಿ ಬರುವಳು.]

ಮುದುಕಿ—ಇದೇಂ ಮಾರಿಯಾಟಂ? ಇನಿತು ಜನಂ ತಿರುಗುತಿರ್ಪ ಈ ಕತ್ತಲೆಯ ಬಯಲಿನೊಳ್ ನನ್ನಂ ಕೇಳ್ವರೆ ಇಲ್ಲ. ಎಲ್ಲರುಂ ಪುಡುಕುತಿರ್ಪರೆ ಪೊರತು, ತೋರ್ಪರಂ ಕಾಣೆಂ. ಓ ನಾರಾಯಣಾ, ಎಲ್ಲಿರುವಯ್? ನುಡಿಯಯ್!— ಮಕ್ಕಳಿಲ್ಲದ ಮುದುಕರಂ ಕೇಳ್ವರಾರ್? ಮಗೂ, ನೀನು ನನ್ನೊಡನಿರಲು ಎಲ್ಲರ್ಗ್ಗಂ ನಾಂ ನಚ್ಚಿನವಳಾಗಿರ್ದೆಂ. ನೀನು ತುಳಿಲಾಳೆಂದು ತಿಳಿದು ದೊರೆಯ ಸೇನಾಧಿಕಾರಿಗಳುಂ ನನ್ನೆಡೆಗೆ ಬಂದು ನೂರಾರು ನವಿನುಡಿಗಳಿಂ, ಕವಡಾಸೆಗಳಿಂ ಬೆನ್ನಂ ತಟ್ಟಿ ಬೋಳೈಸಿ, ದೇಶಾಭಿಮಾನಂ, ಸ್ವಾಮಿಭಕ್ತಿ, ಧರ್ಮನಿಷ್ಠೆ, ಕ್ಷಾತ್ರಧರ್ಮಂ ಮೊದಲಹ ಸಮಯಕ್ಕೊದಗುವ ಉಪಾಯ ವೇದಾಂತಮುಂ ಪೇಳ್ದು ನಿನ್ನಂ ಕೊಂಡೊಯ್ದರ್. ನಾನುಂ ಮಾತಿಗೆ ಮರುಳಾದೆಂ. ಈಗಳೆಲ್ಲಿ ಆ ತತ್ತ್ವಂಗಳುಂ, ಆ ಅಧಿಕಾರಿಗಳುಂ, ಆ ಭಕ್ತಿ ಧರ್ಮಾಭಿಮಾನಂಗಳುಂ? ಎಲ್ಲಬರು ಪುಸಿಯಲ್ತೆ? ತಿಳಿಯದವರ್ಗ್ಗೆ ತಿಳಿದವರೊಡ್ಡುವ ಬಲೆಯುರುಳ್ಗಣ್ಣಿಗಳಲ್ತೆ? ಅಂತುಂ ಶ್ರೀಮಂತರ ಕಲಹಾಗ್ನಿಗೆ ಯಜ್ಞಪಶುಗಳೆಮ್ಮಂತಹ ದರಿದ್ರರಲ್ತೆ?—

[ಮುದುಕಿಯು ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತು ಚಿಂತಿಸುವಳು. ಮಾತೆಯೂ ಕಂದನೂ ಪ್ರವೇಶಿಸುವರು.]

ಕಂದ— ಅಮ್ಮಾ, ನಾನಿನ್ನು ನಡೆಯಲಾರೆ!

**ಮಾತೆ—** ಬಾ ಮಗೂ, ಎತ್ತಿಕೊಳ್ವೆಂ. (ಎತ್ತಿಕೊಂಡು ಮುಂದೆ ನಡೆದು ಮುದುಕಿಯನ್ನು ಕಂಡು) ಯಾರಲ್ಲಿ? (ಹತ್ತಿರ ಹೋಗಿ ನೋಡಿ) ಅಜ್ಜೀ, ಇದೇಕಿಲ್ಲಿ ಕುಳಿತಿರುವೆ?

**ಮುದುಕಿ**—(ತಲೆಯೆತ್ತಿ ನೋಡಿ) ತಾಯಿ, ನನ್ನ ಮಗು ನಾರಾಯಣನಂ ಹುಡುಕಿ ಹುಡುಕಿ ಸೋತು ಸುಣ್ಣವಾದೆ. ಅಯ್ಯೊ, ಎಲ್ಲಿರ್ಪನೋ ಏನೋ? ಪೇಳ್ವರಿಲ್ಲ, ಕೇಳ್ವರಿಲ್ಲ; ನನ ಗಿನ್ನೇಂ ಗತಿ? ಪೇಳಮ್ಮಾ! ಕಡೆಗಾಲದೊಳು ಕಲ್ಲೆಡವಿದಂ ತಾಯ್ತು. (ಕೂಸನ್ನು ನೋಡಿ) ತಾಯಿ, ಈ ಮಗುವನೇಕೆ ಇಲ್ಲಿಗೆಳತಂದಿರುವೆ? ಈ ರಾತ್ರಿಯ ರುದ್ರಭೂಮಿಗೆ?

**ಮಾತೆ—** ಅಜ್ಜೀ, ಗುಡಿಸಲೊಳಾರುಮಿಲ್ಲ; ಇವನಂ ಬಿಟ್ಟರೆನ ಗಿನ್ನಾರುಂ ಗತಿಯಿಲ್ಲ—ಕದನಕ್ಕೈತಂದ ನನ್ನ ಪತಿಯನರಸಿ ಬಂದಿಹೆನು. ಈ ಹೆಬ್ಬುಯಲಿನ ಹೆಣದ ಬಣಬೆಯೊಳು ಕಾಣಿಸದೇನುಂ!

**ಮುದುಕಿ**—ನಿನ್ನ ಪತಿಯಾರ ಕಡೆಯವಂ?

**ಮಾತೆ—** ಪಾಂಡವರ ಪಕ್ಷದವಂ.—ನಿನ್ನ ಪುತ್ರಂ?

**ಮುದುಕಿ**—ಕೌರವನವಂ.

**ಮಾತೆ—** ನಿನ್ನ ಮಗನೆನ್ನ ಪತಿಗೆ ಪಗೆಯಾಗಿರ್ದನೇಂ?

**ಮುದುಕಿ**—ಆರಿಗಾರು ಪಗೆ? ನಿನಗಾಂ ಪಗೆಯೇ?

**ಮಾತೆ—** ಉಂಟೇ!

**ಮುದುಕಿ**—ನಮ್ಮವೋಲಿಹ ಬಡಜನಂಗಳೆಲ್ಲ ಮಂಕುಗಳಮ್ಮಾ. ಪಾಂಡವರು ಕೌರವರು ನೆಲಕೆ ಪೊಯ್ದಾಡಿದರೆ ನಮ್ಮ ಮಕ್ಕಳು ಅವರಿವರಂ ಕೆಳೆಗೊಂಡು ನಿಂತು ಹೆಮ್ಮೆಗೆ ಬಡಿದಾಡಿ ಮಡಿಯುವರು.—ನನ್ನ ಮಗುಗೆ ನಿನ್ನಾತನ ಮೇಲೆ ಪಗೆಯೇಂ?—ನಾವಿರ್ವರುಂ ದುಃಖಾರ್ತರಮ್ಮಾ! ಬಾ ಹುಡುಕಿ ನೋಡುವಂ.

[ಇಬ್ಬರೂ ಹೆಣಗಳ ನಡುವೆ ಕತ್ತಲಲ್ಲಿ ಸ್ವಲ್ಪ ಸ್ವಲ್ಪ ದೂರದಲ್ಲಿಯೇ ತಿರುಗುತ್ತ ಹುಡುಕುವರು. ಒಂದೆಡೆ ಮಾತೆಯು ನಿಂತು ಚೀರಿ ಮಗುವನ್ನು ಕೆಳಗಿಳಿಸಿ ರೋದಿಸುವಳು. ಅಲ್ಲಿ ಇಬ್ಬರು ಭಟರು ಒಬ್ಬರನ್ನೊಬ್ಬರು ಭರ್ಜಿಗಳಿಂದ ತಿವಿದು ಮಡಿದಿರುವರು. ಒಬ್ಬನು ಮುದುಕಿಯ ಮಗನು. ಮತ್ತೊಬ್ಬನು 'ಮಾತೆ'ಯ ಪತಿಯು. ಮುದುಕಿ ರೋದನವನ್ನು ಆಲಿಸಿ ಓಡಿ ಬರುವಳು.]

ಮುದುಕಿ—ಏನಾಯ್ತು, ಮಗಳೇ?

ಮಾತೆ— ಅಯ್ಯೋ, ಅಜ್ಜೀ, ನೋಡಿಲ್ಲಿ: ನನ್ನ ಪತಿಯಂ ಈ ಪಾಪಿ ತಿವಿದು ಕೊಂದಿಹಂ. ಅಯ್ಯೋ—

ಮುದುಕಿ—ಅಯ್ಯೋ, ಅಯ್ಯೋ, ನನ್ನ ಮಗನಂ ನಿನ್ನ ಪತಿ ತಿವಿದು ಕೊಂದಿಹನಲ್ಲಮ್ಮಾ!—ಅಯ್ಯೋ, ಪಾಂಡವರು ಹಾಳಾಗಲಿ!

ಮಾತೆ— ಅಯ್ಯೋ, ಕೌರವರು ಹಾಳಾಗಲಿ!

[ಎಲ್ಲರೂ ಬಿದ್ದು ಗೋಳಿಡುವರು.]

---

# ದೃಶ್ಯ ೯

[ಕುರುಕ್ಷೇತ್ರ ಶ್ಮಶಾನದ ಒಂದು ಭಾಗದಲ್ಲಿ ಪಾಂಡವ ಪಕ್ಷದವರ ಚಿತೆ. ಭೀಮ, ಅರ್ಜುನ, ಧರ್ಮರಾಯ, ದ್ರೌಪದಿ ಎಲ್ಲರೂ ಶೋಕವಿಹ್ವಲರಾಗಿ ನಿಂತಿದ್ದಾರೆ. ಸೂಡಿನ ಮೇಲೆ ಅಭಿಮನ್ಯು ಘಟೋತ್ಕಚರೇ ಮೊದಲಾದವರ ಶವಗಳಿವೆ. ಇದುವರೆಗೂ ಕಲ್ಮನಸ್ಸಿನಿಂದಿದ್ದ ಭೀಮನಿಗೆ ಇಂದು ಸೂಡಿನ ಮೇಲಿದ್ದ ಘಟೋತ್ಕಚನ ಶವವನ್ನು ನೋಡಿ ಮರುಕವು ಮಿತಿಮೀರಿಹೋಗಿದೆ. ಅಸ್ಪಷ್ಟ ರೋದನ ಧ್ವನಿಯು ಎಲ್ಲೆಲ್ಲಿಯೂ ವ್ಯಾಪಿಸಿದೆ.]

ಧರ್ಮರಾಯ—ಭೀಮಸೇನ, ಮೊದಲ್ಗೆಯ್ದ ಕಜ್ಜಮಂ ಕೊನೆಗಾಣ್ಬ.
ಆದುದಾಯಿತು ; ಚಿಂತೆಯಿಂದೇಂ? ಸೂಡಿಂಗೆ
ಬೆಂಕಿಯಿಡು. (ಭೀಮನು ಗೋಳಿಡುವನು)
ನೀನಿಂತು ಗೋಳಾಡಿದೊಡೆ, ಭೀಮ,
ಉಳಿದರಂ ಸಂತಯ್ಪರಾರ್ ?

ಭೀಮ— ಅಣ್ಣಾ,
ಕೊಲೆಗಾರನಾನೆಂಬುದಂ ಈಗಳರಿತೆಂ.
ಈ ಎನ್ನ ಮುದ್ದು ಶಿಶುಗಳ ಪೆಣಗಳೆಡೆ ನಿಂತು
ಗಾಂಧಾರಿ, ಧೃತರಾಷ್ಟ್ರರಳಲಾಳಮಂ ತಿಳಿದೆಂ.

[ಅರ್ಜುನ ಮೊದಲಾದವರು ಅವನೊಡನೆ ರೋದಿಸುವರು.]

ಧರ್ಮರಾಯ—(ಸ್ವಗತ) ಬೀರರಾದೊಡಮೇಂ? ಸ್ಥಿತಪ್ರಜ್ಞರಲ್ಲದೀ
ಮಾನವರ್ ಕೋಪಮನೆ ಕೆಚ್ಚೆಂದು ಭ್ರಮಿಸುವರ್.
ಕೋಪಂ ಬತ್ತಲೊಡನೆ ಕೆಚ್ಚುಂ ಕರಗುವುದು.
ಕೋಪಮೆಂಬಾ ಮದ್ಯಪಾನಮಿಲ್ಲದೆ ಇವರ್
ಕೊಲೆಗೆ ಕೈಯಿಡಲರಿದು!—ಚಿತೆಗೆ ನಾನೇ

ಬೆಂಕಿಯಿಡುವೆಂ.—(ಬೆಂಕಿ ಇಡಲು ಹೋಗಿ ನಿಲ್ಲುವನು)

ಅದಾರಲ್ಲಿ ಬರ್ಪವರ್?

ಮಾತೆ ಕುಂತೀದೇವಿ! ಸೋದರಂ ಸಹದೇವಂ!

ಆರನೋ ಪೊತ್ತು ತಂದಪರಲ್ತೆ?

[ಕುಂತಿ ಸಹದೇವರು ಕರ್ಣನನ್ನು ತರುವರು. ಎಲ್ಲರೂ ಆಕಡೆ ತಿರುಗಿ ನಿಲ್ಲುವರು. ಭೀಮನು ಮರುಕವನ್ನು ತೆಗೆದೊಗೆದು ನಿಂತು ಹುಬ್ಬು ಗಂಟಿಕ್ಕಿಕೊಂಡು ದುರದುರನೆ ಕರ್ಣನ ಶವವನ್ನು ನೋಡುವನು.]

ಧರ್ಮರಾಯ—ಸಹದೇವ, ಇದೇನಯ್?

ಕುಂತಿ— ಓ ಮಗೂ, ಯುಧಿಷ್ಠಿರಾ, ಕರ್ಣನಂ ಇದರೊಳೇ ದಹನಂ
ಗೈವಂತೆನಗೆ ಕೃಪೆಮಾಡೈ.

ಧರ್ಮರಾಯ— ತಾಯೆ,
ಸುಡುವ ಬೆಂಕೆಗೆ ಕರುಣೆಯಿಲ್ಲ, ಕರುಬಿಲ್ಲ.
ಆದೊಡಂ, ಇದರರ್ಥಮೇಂ? ತಿಳಿಯಲೆಳಸುವೆಂ.

ಕುಂತಿ— ಕಂದಾ, ನಾನಾವುದಂ ಪೇಳಲಾರೆಂ;
ಎನ್ನಾಸೆಯಂ ನೀಂ ನಡೆಸಿಕೊಡವೇಳ್ಕುಂ.

ಭೀಮ— (ರೋಷದಿಂದ)
ಏಂ ಮಾಳ್ಕೆಯಿದು, ತಾಯೆ? ಎಮ್ಮ ಕುಲಘಾತುಕಂ
ಈತನಂ ನಾವುರಿಪುವುದೆ? ನೋಡು, ನೋಡಿದಂ:
ಇವನೆ ಕೊಲೆಗೈದಿರ್ಪ ಅಭಿಮನ್ಯು, ಘಟೋತ್ಕಚರ್.
(ಕಣ್ಣು ಕೆರಳಿಸಿ ಸಹದೇವನನ್ನು ನೋಡಿ)
ಸಹದೇವ, ಇದೇನಂ ನೀನೆಸಗಿರ್ಪೆ! ತೊಲಗಿಸಿಲ್ಲಿಂ
ಈ ಮಿಗದ ಪೆಣಮಂ! (ಕುಂತಿ ಅಳುವಳು)

ಧರ್ಮಜಾ, ರೋದನಕೆ
ನೀನಳುಕಿದೊಡೆ ವಿಲಯಮಹುದಿಂದೆ!

**ಅರ್ಜುನ—** ಅಣ್ಣಾ,

ಅಭಿಮನ್ಯುವಮಂ ಬೇಳ್ವ ಬೆಂಕೆಯುಂ ಕರ್ಣನಂ
ಸುಡಲಾಗದು.—ಈ ಕರ್ಣನಿವನಾರ್ ನಮಗೆ?

**ಭೀಮ—**ಪಗೆಯು ಕೆಳೆ! ಅಭಿಮನ್ಯುವಮಂ ಘಟೋತ್ಕಚನಂ ಮೋಸದಿಂ
ದಿರಿದಪಂ!

**ಕುಂತಿ—** (ಮರುಗಿ) ಓ ಭೀಮ, ಓ ಅರ್ಜುನ,
ಓ ಎನ್ನ ಕಂದಗಳಿರಾ, ಕೈಮುಗಿದು ಬೇಡುವೆಂ,
ಸೆರಗೊಡ್ಡಿ ಬೇಡುವೆಂ ಎನ್ನಾಸೆಯಂ ಸಲಿಸಿಂ!
ನಾಂ ನಿಮಗೆ ತಾಯಿ ಅಹುದಾದೊಡೆ—

**ಭೀಮ—** ತಾಯೆಂದೆ
ತಿಳಿದಿಂತು ಪೇಳ್ದಪೆಂ.

**ಕುಂತಿ—** ನಾಂ ನಿಮಗೆ ತಾಯಲ್ತು,
ಮೋಣಿವಂಗೆ ತಾಯೆಂದು ತಿಳಿದೆನ್ನ ಬಯಕೆಯಂ
ದಯೆಗೈಯಿಂ. ವಾದಿಸದಿರಿಂ ಓ ಎನ್ನ ಪುತ್ರರಿರಾ!

[ಅಶ್ವತ್ಥಾಮನು ಬರುವನು.]

**ಅಶ್ವತ್ಥಾಮ—**ಓ ಧರ್ಮಪುತ್ರಾ,
ವೀರನೊರ್ವನ ಕಟ್ಟಕಡೆ ಬಯಕೆಯಂ ಸಲಿಸೆ
ಇಲ್ಲಿಗೈತಂದಿಹೆಂ. ವೀರರಾಗಿಹ ನೀವು
ಎನಗೆ ನೆರವಾಗದಂ ನೆರವೇರಿಸಲೆವೇಳ್ಕುಂ.
ಕೌರವೇಂದ್ರಂ ಮಡಿವ ಮೊದಲೆನ್ನಂ ಕರೆದು
ಕರ್ಣನಂ ತನ್ನೊಡನೆ ಸೂಡುಗೈಯಲ್ ಬೆಸಸಿ
ಪೋದಂ. ಪೋದವರ ಬಯಕೆಯಂ ಇರ್ಪವರ್
ಕೈಗೂಡಿಪುದೆ ಧರ್ಮಂ!

**ಭೀಮ—** ಅಶ್ವತ್ಥಾಮ, ಕರ್ಣನಂ
ಕೊಂಡುಪೋಗಯ್. ನೀನಿವಂಗೆ ಸಂಸ್ಕಾರ-
ಮೆಸಗುವುದೆ ಧರ್ಮಂ!

ಕುಂತಿ— ಓ ಅಶ್ವತ್ಥಾಮ,

ಕರ್ಣನಂ ಈ ಎಮ್ಮ ಚಿತೆಯೊಳೆ ದಹಿಪುದು

ಎನ್ನಾಸೆ. ಆ ಬಯಕೆಗಡ್ಡಬರಬೇಡಯ್, ತಂದೆ.

ಅಶ್ವತ್ಥಾಮ—ದೇವಿ, ಕೌರವನಾಶೆ! ಮೋಣೆನ್ನ ಬಾಸೆ!

ಕೈಮುಗಿದು ಕೇಳ್ವೆಂ; ಬೀಳ್ಕೊಡಿಂ ಕರ್ಣನಂ.

ಭೀಮ— ತಡಮೇಂ? ಕೊಂಡುಪೋಗಯ್, ಅಶ್ವತ್ಥಾಮ!

ಕುಂತಿ— (ಭೀಮನ ಕಡೆ ತಿರುಗಿ ಹೇಳುವಳು)

ಓ ಭೀಮ,

ತಾಯಿಗೋಸುಗಮಾದೊಡಂ ಕರಗಲಾರೆಯೇಂ?

ಬೆಂದೊಡಲ್ಗಿಂತು ಕಬ್ಬುನಮುಂ ಚುರ್ಚುವರೇ?

(ಅಶ್ವತ್ಥಾಮನು ಕರ್ಣನನ್ನು ಕೊಂಡುಹೋಗುವನು. ಕುಂತಿಯು ತಿರುಗಿ ನೋಡಿ ಬಿದ್ದು ಗೋಳಾಡುವಳು)

ಓ ಕಂದಾ, ಓ ಕರ್ಣಾ, ನಿನ್ನನಿದಕಾಗಿಯೇ

ಪೆತ್ತೆನೇಂ? ಸುಮ್ಮನಿರ್ದಪೆ ಏಕೆ, ಓ ಸಹದೇವ?

ಧರ್ಮರಾಯ—ಇದೇನಿದು, ಸಹದೇವ? ತಾಯಿ ಕರ್ಣನ ಪಡೆದೆಂ

ಎಂದಳಲ್ವಳಲ್ಲಾ!

ಸಹದೇವ— ಮುನ್ನಿನೆನ್ನಂ, ಅಣ್ಣಾ;

ತಾಯಿಯೊಡಲೊಳೆ ಬಂದ ರಾಧೇಯನೆಮಗೆಲ್ಲ

ಪಿರಿಯಣ್ಣಂ!

ಧರ್ಮರಾಯ—(ಸಿಡಿಲೆರಗಿದವನಂತೆ) ಏಂ ಪೇಳ್ದಯ್?

ಭೀಮ— ಪುಸಿಯಾಡದಿರ್!

ಅರ್ಜುನ—ಅಯ್ಯೋ, ಏನಾದುದು ಕಡೆಗೆ?

ಸಹದೇವ—ವಿವರಂ ಅನಂತರಂ. ನಾಂ ಪೇಳ್ದುದದು ದಿಟಂ!

ಕುಂತಿ— ಓ ಎನ್ನ ಕಂದಾ, ಓ ಕರ್ಣಾ,

ಈಗಳಿವರೆಲ್ಲರುಂ ನಿನ್ನವರೆ. ನಾನೆ

ಪಾಪಿ ಪರಕೀಯಳಾದೆನಲ್ತೆ?
ಲೋಕಮಿವರಾರನುಂ ನಿಂದಿಸದು. ಎನ್ನನೋ,
ಮಗನ ಕೊಲೆಯಂ ಗೈದ ಕಡುಪಾಪಿ ಎಂದು
ಪೇಸುವುದು! (ಅಳುವಳು)

ಧರ್ಮರಾಯ—ತಾಯೇ, ಏನನೆಸಗಿರ್ಪೆ, ನೀಂ?

ಅರ್ಜುನ—ಓ ಕೃಷ್ಣಾ, ಪುಸಿವೇಳ್ದು ಕೊಲಿಸಿದೆಯಾ!

ಭೀಮ— ಕಡೆಗುಂ ಪೊಲಸಾದುದೀ ಭಾರತ ಸಂಗ್ರಾಮಂ!

[ದೃಶ್ಯವು ಮಾಯವಾಗುವುದು]

---

# ದೃಶ್ಯ ೧೦

[ಕುರುಕ್ಷೇತ್ರ ಶ್ಮಶಾನ. ಎಲ್ಲಿಯೂ ನೀರವತೆ, ನಿರ್ಜನತೆ. ಕತ್ತಲು ಕವಿದಿದೆ. ಪಂಜುಗಳ ಬೆಳಕಿಲ್ಲ, ಸುಳಿದಾಡುವ ಮನುಷ್ಯಾಕೃತಿಗಳಿಲ್ಲ. ಎಲ್ಲ ಬಟ್ಟ ಬಯಲಾಗಿದೆ. ಆಕಾಶದ ಅನಂತ ನೀಲಪಟದಲ್ಲಿ ಖಚಿತವಾದ ಸಾವಿರಾರ ನಕ್ಷತ್ರಗಳ ಮಂದಕಾಂತಿಯು ನಸುಹಬ್ಬಿ ಘೋರ ದೃಶ್ಯವನ್ನು ಘೋರತರವಾಗಿ ಮಾಡಿದೆ ಮಸಣದ ನಡುವೆ ಪಕ್ಕಪಕ್ಕದಲ್ಲಿ ಎರಡು ಭಸ್ಮರಾಶಿಗಳಿವೆ. ಒಂದು ಪಾಂಡವ ಪಕ್ಷ ವಿನಾಶದ ಪ್ರತಿನಿಧಿ, ಇನ್ನೊಂದು ಕೌರವ ಪಕ್ಷ ವಿನಾಶದ ಪ್ರತಿನಿಧಿ. ಆ ಒಂದೊಂದು ಭಸ್ಮ ಪರ್ವತದ ಮೇಲೆ ಒಂದೊಂದು ಕಾಲಿಟ್ಟುಕೊಂಡು ರುದ್ರ ಲಯಮೂರ್ತಿಯಾದ ಮಹಾದೇವನು ಉನ್ಮತ್ತನಾಗಿ ಭೀಮಾಕಾರನಾಗಿ ನಿಂತಿದ್ದಾನೆ. ಮುಡಿಗೆದರಿಹೋಗಿದೆ. ಕೊರಳಿನಲ್ಲಿರುವ ಹಾವುಗಳು ಭಯದಿಂದ ಹದುಗಿಕೊಂಡಿವೆ. ಹುಲಿದೊಗಲನ್ನು ತೊಟ್ಟಿದ್ದಾನೆ. ತ್ರಿಶೂಲಧಾರಿಯಾಗಿದ್ದಾನೆ. ಬೂದಿಯ ರಾಶಿಗಳಿಂದ ಆಗಾಗ ಬೂದಿ ತೆಗೆದುಕೊಂಡು ಬಳಿದುಕೊಳ್ಳುವನು. ಒಂದೊಂದು ಸಾರಿ ಬಳಿದುಕೊಳ್ಳುವಾಗಲೂ ಒಬ್ಬೊಬ್ಬ ಮಹಾಭಾರತದ ವೀರ ಪುರುಷನ ಹೆಸರನ್ನು ಕೂಗುವನು. ನಡುನಡುವೆ ಹುಚ್ಚನಂತೆ ಗಹಗಹಿಸಿ ಕೇಕೆಹಾಕಿ ನಗುವನು. ಎಲ್ಲೆಲ್ಲಿಯೂ ನಿಃಶಬ್ದ. ಭೀಷಣವಾಗಿದೆ; ಭೀಕರವಾಗಿದೆ, ಗಭೀರವಾಗಿದೆ, ರುದ್ರವಾಗಿದೆ.]

ರುದ್ರ— ದುರ್ಯೋಧನಂ. ಭೀಷ್ಮಂ. ದ್ರೋಣಂ. ಕರ್ಣಂ. ಅಭಿಮನ್ಯು. ಘಟೋತ್ಕಚಂ. ಭೀಮಂ. ಅರ್ಜುನಂ. ದ್ರೌಪದಿ. ಯುಧಿಷ್ಠಿರಂ. ಕೃಷ್ಣಂ!

[ಮುಸುಗುಹಾಕಿಕೊಂಡಿರುವ ಅಸ್ಪಷ್ಟ ಆಕಾರಗಳು ಆ ಕತ್ತಲಲ್ಲಿ ಪಂಕ್ತಿಪಂಕ್ತಿಯಾಗಿ ಬರುವುವು. ಅವರಲ್ಲಿ ಗಂಡಸರು, ಹೆಂಗಸರು, ಮಕ್ಕಳು, ವಿಧವೆಯರು, ವೀರರು ಎಲ್ಲ ಇರುವರು. ಅವರೆಲ್ಲ ಮಡಿದ ಪಾಂಡವ ಕೌರವ ಪಕ್ಷದವರ ಬಂಧುಗಳು. ಕೌರವ ಪಕ್ಷದವರು ಒಂದು ಸಾಲಾಗಿ ಮಹಾರುದ್ರನ ಎಡದಿಂದ ಬಲಕ್ಕೆ ಹೋಗಿ ಮರೆಯಾಗುವರು. ಪಾಂಡವ ಪಕ್ಷದವರು ಇನ್ನೊಂದು ಸಾಲಾಗಿ ಬಲದಿಂದ ಎಡಕ್ಕೆ ಹೋಗಿ

ಮರೆಯಾಗುವರು. ಮಹಾದೇವನು ಎಲ್ಲವನ್ನೂ ದುರುದುರನೆ ನೋಡುತ್ತ ನಿಂತಿದ್ದು ಪುನಃ ಪ್ರಾರಂಭಿಸುವನು. ಆತನ ಧ್ವನಿಯು ದೂರದ ಗುಡುಗಿನಂತೆ ಗಂಭೀರವಾಗಿ ಮೊಳಗುವುದು; ಶ್ಮಶಾನ ಮೌನವನ್ನು ತೂಗಿ ಮಲಗಿಸುವ ಜೋಗುಳದಂತಿರುವುದು.]

ಎಲ್ಲ ದಾನಗಳು, ಎಲ್ಲ ಧರ್ಮಗಳು,
 ಕಡೆಗಿಲ್ಲಿಗೇ—ಎನ್ನ ಬಳಿಗೆ!
ಎಲ್ಲ ಪಾಪಗಳು, ಎಲ್ಲ ಪುಣ್ಯಗಳು,
 ಕಡೆಗೊಂದು ನಗೆಗೇ—ಭಸ್ಮವೆನಗೆ!
ನಕ್ಷತ್ರ ಖಚಿತವಿಾ—ನಭೋವಿತಾನಂ,
 ಸಸ್ಯಶೋಭಿತವಿಾ ಹಿರಿಯ ಭೂಮಿ,
ಮೊರೆದು ಭೋರಿಡುವ ಎಲ್ಲೆ ಕಾಣದಿಹ
 —ಕಡಲ ಹಬ್ಬುಗೆಯು—ಕಡೆಗಿಲ್ಲಿಗೇ!
 ಕಡೆಗಿಲ್ಲಿಗೇ!—ಕಡೆಗಿಲ್ಲಿಗೇ!
ಕಾಲದೇಶಗಳು, ಜನನ ಮರಣಗಳು,
 ಜೀವಕೋಟಿಗಳು,—ಮಸಣದೆಡೆಗೇ!
 —ಮಸಣದೆಡೆಗೇ! ಕಟ್ಟಕಡೆಗೇ!
ಎನ್ನ ಹುಚ್ಚಿನಿಂದುದುಸಿದೀ ಸೃಷ್ಟಿ
 ಕಡೆಗೆ ತುತ್ತಾಗುವುದು—ಎನ್ನ ಹುಚ್ಚಿಗೇ!
 —ಎನ್ನ ಹುಚ್ಚಿಗೇ! ಎನ್ನ ಹುಚ್ಚಿಗೇ!
ಇದೆ ಜಗದ ಮೊತ್ತಮೊದಲಿದೆ ಜಗದ ತುತ್ತತುದಿ,
 ಇದೆ ಜಗದ ಕಟ್ಟಕಡೆ ನೆಚ್ಚಿಗೇ!
 —ಕಡೆ ನೆಚ್ಚಿಗೇ! ಕಡೆ ನೆಚ್ಚಿಗೇ!

[ರುದ್ರನು ದೃಷ್ಟಿಜ್ವಾಲೆಯನ್ನು ಬೀರಿ ಧ್ಯಾನಮಗ್ನನಾಗುವನು. ಶ್ರೀಕೃಷ್ಣನು ಮೆಲ್ಲಗೆ ಹಜ್ಜೆಯಿಡುತ್ತ ಗಂಭೀರವಾಗಿ ಪ್ರವೇಶಿಸುವನು. ರುದ್ರನನ್ನು ನಟ್ಟನೋಟದಿಂದ ನೋಡಿ ಕರೆಯುವನು.]

ಕೃಷ್ಣ— ಮಹಾದೇವ!

ರುದ್ರ— (ನಿದಾನವಾಗಿ ಕಣ್ಣು ತೆರೆದು ಕೃಷ್ಣನನ್ನು ನೋಡಿ) ವಾಸುದೇವ, ಬಂದೆಯೇಂ!

ಕೃಷ್ಣ— ಒಂದೆನ್ಯೆ, ಭಗವನ್. ನೀನೇಂ ರುದ್ರನಾಟಕದ ಕೊನೆಯ ದೃಶ್ಯಾಭಿನಯದೊಳ್ ತಲ್ಲೀನನಾಗಿರ್ಪೆಯ್ಯೆಸೆ!

ರುದ್ರ— ಅಹುದಹುದು, ಸೂತ್ರಧಾರ! (ನಸುನಕ್ಕು) ನಿನ್ನ ನಾಟಕಂ ನೇರವಾದುದೇ?

ಕೃಷ್ಣ— ನಿನ್ನ ನೆರವೊಂದಿರೆ ನೇರವಾಗದೇಂ!

ರುದ್ರ— ರಸಿಕರ್ಗೆ ಗುರು ನೀಂ. ನಿನ್ನ ದೃಶ್ಯ ಕಾವ್ಯದ ಸೊಬಗುಮಂ ಗಭೀರಮುಮಂ ಬಣ್ಣಿಸಲರಿದು.—ಪೂರ್ಣಂ; ನವರಸ ಪರಿಪೂರ್ಣಂ!

ಕೃಷ್ಣ— ನಿನ್ನೊಂದಾವೇಶಮಿರೆ ಸಫಲಂ ರುದ್ರಕಾವ್ಯಂ!

ರುದ್ರ— ವಾಸುದೇವ, ಮುಂದಾವ ಕಾವ್ಯಮಂ ಕಟ್ಟುವೆಯ್ಯೆ?

ಕೃಷ್ಣ— ಕಲಿಯುಗ ಮಹಾಕಾವ್ಯಮಂ! ನಾಳೆಯೆ ಪೀಠಿಕಾ ದೃಶ್ಯಾರಂಭಂ; ಕಲಿಯುಗ ಪ್ರಾರಂಭಂ!

ರುದ್ರ— ರಸಮೂರ್ತಿ, ನೋಡಲಾಟಿಪೆಂ ಆ ಕಥಾ ಸಂವಿಧಾನಮಂ.

ಕೃಷ್ಣ— ತೋರ್ದಪೆಂ ದಿವ್ಯ ದರ್ಶನಮಂ. ಕಾಣದೋ, ಮತ್ಪ್ರಣೀತಂ ಕಲಿಯುಗ ಮಹಾಲಲಿತ ಕಾವ್ಯಂ.

[ಶ್ರೀಕೃಷ್ಣನು ಕೈತೋರುವನು. ಕಾಲದ ಪರದೆಗಳು ಒಂದೊಂದಾಗಿ ತೆರೆಯುವುವು. ರುದ್ರನು ಪ್ರಸನ್ನನಾಗಿ ನೋಡುವನು.]

ರುದ್ರ— ವರ್ಣಿಸ್ಯೆ, ವಿಶ್ವಕವಿ, ಆ ಮಿಂಚುವ ದೃಶ್ಯಮಾಲೆಗಳಂ!

ಕೃಷ್ಣ— ಬಣ್ಣಿಪೆಂ ಮುಖ್ಯಮಂ:—

ನೋಡದೋ ಭಾರತವರ್ಷಂ, ಉಪನಿಷದಾರಾಮಂ....

ಗೌತಮ ಬುದ್ಧನವಂ, ಮೌಢ್ಯನಿವಾರಕಂ!....

ಅಶೋಕಂ, ಚಕ್ರವರ್ತಿ ಶ್ರೇಷ್ಠಂ!....

ಏಷ್ಯಾ ಖಂಡಂ!....ಕ್ರಿಸ್ತಂ! ದೀನರಕ್ಷಕಂ!....
ಯವನದೇಶಂ!....ಜ್ಞಾನಿಗಳವರ್!....
ರೋಮನ್ ಚಕ್ರಾಧಿಪತ್ಯಂ..ಐರೋಪ್ಯ ಖಂಡಂ....
ಆಂಗ್ಲೇಯ ದೇಶಂ!..ಯಂತ್ರಕೌಶಲಂ!....ಇದೋ,
ಅರಬ್ಬೀಸ್ಥಾನಂ....ಮಹಮ್ಮದಂ....ಕೇರಳಂ....
ಆಚಾರ್ಯ ಶಂಕರಂ....ಮೇಧಾವಿ, ಸಿದ್ಧಂ!....
ಮೊಗಲ ಸಾಮ್ರಾಜ್ಯಂ....ಮಹಾರಾಷ್ಟ್ರಂ....
ಕನ್ನಡ ದೇಶಂ....ಕವಿ ರನ್ನಂ....ವಿಜಯನಗರಂ..
ಪಾಶ್ಚಾತ್ಯ ಘೋರ ಯುದ್ಧಂ!....ರಷ್ಯಾದೇಶಂ!....
ವಿಪ್ಲವಂ....ಪ್ರಜಾಧಿಪತ್ಯಂ..ಚಕ್ರವರ್ತಿ ವಿನಾಶಂ..
ವಿಪ್ಲವ ಮತಪ್ರಚಾರಂ....ಚೀನಾದೇಶಂ......
ರಕ್ತಪ್ರವಾಹಂ....ಸಿಡಿಗುಂಡುಗಳಾಟಂ..ರೌದ್ರಂ!
ಪಿಶಿತಾಶಾಕ್ರಾಂತ ಭಾರತವರ್ಷಂ....ದಾರಿದ್ರ್ಯಂ..
ದೌರ್ಬಲ್ಯಂ.....ಶ್ರೀರಾಮಕೃಷ್ಣಪರಮಹಂಸಂ!

(ರುದ್ರನೂ ಕೃಷ್ಣನೂ ನಮಸ್ಕಾರ ಮಾಡುವರು)

ಸರ್ವಧರ್ಮಸಮನ್ವಯಾಚಾರ್ಯಂ....ವಿವೇಕಾನಂದಂ ..
ಸ್ವಾತಂತ್ರ್ಯ ಸಂಗ್ರಾಮಂ....ಅಹಿಂಸಾವ್ರತಂ....
ಮಹಾತ್ಮಂ....ಸತ್ಯಾಗ್ರಹಂ!....ಅತ್ಯಾಚಾರಂ!!
..ದೌರಾತ್ಮ್ಯಂ!!!

(ರುದ್ರನು ಶೂಲವೆತ್ತುವನು)

ತಾಳ್ಮೆ, ತಾಳ್ಮೆ, ಓ ರುದ್ರ. ಕೆಡಿಸದಿರ್ ಕಾವ್ಯಮಂ....
ಮುಂಗಾಣ್ಕೆ....ಸಾರ್ವಭೌಮತ್ವ ಭಂಗಂ....
ಸ್ವತಂತ್ರ ಭಾರತರಂಗಂ....ಸರ್ವಪ್ರಜಾಧಿಪತ್ಯಂ ....
ಸರ್ವಸಮತ್ವಂ....ಜಗತ್ ಕಲ್ಯಾಣಂ......
ಭೂವೈಕುಂಠಂ....ನೋಡದೋ:........
ಕರ್ನಾಟಕಂ... ಲಿಂಗಾಯತ ರಾಜ್ಯಾ......

ದೂರದೊಳ್, ಬಹುದೂರದೊಳ್, ಕಾಲಗರ್ಭದೊಳ್..
ಸಾಮಾನ್ಯ ಮಾನವ ಸಂಸಾರಂ..ಸತಿಪತಿಗಳ ಶೃಂಗಾರಂ.
ಮಕ್ಕಳಾಟಂ, ನೋಟಂ, ಕಾವ್ಯಂ, ಕಲಿಯುಗ ಮಹಾ
ಕಾವ್ಯಂ!

ಸುಮಧುರಂ....ದಿವ್ಯಂ....ಸುಶ್ರಾವ್ಯಂ!

[ಇದ್ದಕ್ಕಿದ್ದ ಹಾಗೆ ದೃಶ್ಯವು ಮಾಯವಾಗಿ, ಕವಿದಿದ್ದ ಕತ್ತಲೆಯು ಇನ್ನೂ ದಟ್ಟವಾಗಿ ಫಕ್ಕನೆ ಅತ್ಯಂತ ಕಾಂತಿಯುಕ್ತವಾಗುವುದು. ಮಾಯವಾದ ಕೃಷ್ಣ ರುದ್ರರ ಸಮ್ಮಿಳಿತ ಅಟ್ಟಹಾಸವು ಗಗನದ ಸುನೀಲ ಶೂನ್ಯದಿಂದ ತರಂಗ ತರಂಗವಾಗಿ ಕೇಳಿಬರುವುದು. ಕಾಂತಿಯು ಮತ್ತೂ ಹೆಚ್ಚುವುದು. ಲಯಮೂರ್ತಿಯಾದ ರುದ್ರನ ನಗೆಯೊಂದಿಗೆ ಸೃಷ್ಟಿಮೂರ್ತಿಯಾದ ಶ್ರೀಕೃಷ್ಣನ ನಗೆಯು ಲಗ್ನವಾಗಿ, ಆ ಮಹಾ ಜಗದ್ವ್ಯಕ್ತಿಗಳ ಸುಮಧುರ ವಿಕಟಾಟ್ಟಹಾಸವು ಮಾಯವಾದ ಶ್ಮಶಾನ ಮೌನದ ಗರ್ಭದಿಂದ ಗಭೀರವಾಗಿ ಹೊರಹೊಮ್ಮಿ ವಿಶ್ವವ್ಯಾಪಿಯಾಗುವುದು.]



## ಪಾತ್ರಗಳು

---

ಭೂದೇವಿ
ಶಿವ
ಜಲಗಾರ
ರೈತ
ಕಬ್ಬಿಗ
ಯುವಕ
ತಿರುಕ
ಭಟ್ಟ
ಬಾಲಕರು
ಹಳ್ಳಿಯ ಹುಡುಗಿ
ಇಬ್ಬರು ಪಾರ್ವರು
ಇಬ್ಬರು ತರುಣರು

# ಜಲಗಾರ

---

## ದೃಶ್ಯ ೧

[ಉಷಃಕಾಲ. ಭೂದೇವಿಯು ಹಾಡುತ್ತಿರುವಳು.

೧

ಭೂದೇವಿ—

ಬಾರಾ ಸಖಿಯೇ ಉಷೆಯೇ ಬಾರ,
ಕೆಂಪಿನ ಮುತ್ತಿನ ಮಾಲೆಯ ತಾರ;
ಮಬ್ಬಿನ ಮಂಜಿನ ಮುಸುಗನು ಎತ್ತಿ;
ಬಾರಾ ಉದಯಾಚಲವನು ಹತ್ತಿ;
ಹಸುರಿನ ಬನಗಳ ಮುದ್ದಿಸಿ ಬಾರ;
ಗಿರಿಶೃಂಗಗಳಾಲಿಂಗಿಸಿ ಬಾರ;
ಮಲಗಿಹ ಖಗಗಳ ಕರೆಯುತ ಬಾರ;
ಮಂದಾನಿಲನ ಎಬ್ಬಿಸಿ ಬಾರ;
ಉದಯಾನಂದದ ಕಲಶವ ತಾರ;
ಬಾರಾ ಸಖಿಯೇ ಉಷೆಯೇ ಬಾರ.

೨

ಮಂಜಿನ ಜಪಮಣಿ ಮಾಲೆಯ ಹಿಡಿದು,
ವನಗಳ ವಿಕಸಿತ ಸುಮಗಳ ಮುಡಿದು,
ಹೂಗಳ ಕೆಂಪಿನ ಕುಂಕುಮವಿಟ್ಟು,
ತಳಿರಿನ ಸೊಬಗಿನ ಸೀರೆಯನುಟ್ಟು,
ಪೈರಿನ ರಮಣೀಯತೆಯನು ತೊಟ್ಟು,

ಮುಗಿಲಿನ ಕುರುಳನು ತೀಲಲು ಬಿಟ್ಟು,
ಉದಯದ ಹೂಗಳ ಸೊಬಗನು ಕೊಯ್ದು,
ವನಗಳ ಸಗ್ನ ಗಭೀರತೆಯಾಯ್ದು,
ವಿಶ್ವದ ಗರ್ಭದ ಚೆಲುವನು ಹೊಯ್ದು,
ಮಾಯಾ ಮೋಹದ ಜಾಲವ ನೆಯ್ದು,
ತಳಿರಿನ ಹೂಗಳ ಸಂಕವ ಮಾಡಿ,
ಬಾರಾ ಉಷೆಯೇ ನಲಿನಲಿದಾಡಿ.

[ಹಾಡುತ್ತಾ ಹಾಡುತ್ತಾ ಮೆಲ್ಲನೆ ರಂಗದಿಂದ ಜಾರುವಳು. ಜಲಗಾರನೊಬ್ಬನು ಕೈಲಿ ಬುಟ್ಟಿ ಪೊರಕೆಗಳನ್ನು ಹಿಡಿದುಕೊಂಡು ಬರುವನು. ಬಂದವನು ಗುಡಿಸಲೆಳಸಿ ಮತ್ತೆ ಸುತ್ತಲೂ ನೋಡಿ]

ಜಲಗಾರ—ಏನಿದ್ದೈಕಿಲ್ಲೊನೆ ಸುರಿಯುತಿಹುದೆಡೆಬಿಡದೆ!
ಮುಸುಗಿಹುದು ಬಿಳಿ ಮಬ್ಬು. ಅಡಿಯಿಡಲು ಬೀದಿಯೇ
ಕಾಣಿಸದು ಕಂಗಳಿಗೆ. ಮಂಜು ಹರಿಯುವವರೆಗೆ
ಕುಳಿತಿಲ್ಲಿ ನಲ್ಗಬ್ಬಗಳ ಹಾಡಿ ನಲಿಯುವೆನು.

[ಅಲ್ಲಿಯೇ ಬಳಿಯಿದ್ದ ಒಂದು ಎತ್ತರವಾದ ಅರೆಯಮೇಲೆ ಕುಳಿತುಕೊಂಡು, ತನ್ನ ಪೊರಕೆ ಬುಟ್ಟಿಗಳನ್ನು ಕೆಳಗಿಟ್ಟು ಹಾಡುವನು.]

೧

ಮೂಡಿ ಬಾ, ಮೂಡಿ ಬಾ,
ಬೇಗ ಬಾ, ಬಾ, ಬಾ!
ತೊಳಗಿ ಬಾ, ಬೆಳಗಿ ಬಾ,
ಜಗದ ಕಣ್ಣೆ ಬಾ, ಬಾ!
ಮಲೆಯ ಹತ್ತಿ ಮುಸುಗನೆತ್ತಿ
ಹಸುರ ಮೇಲೆ ಮುತ್ತ ಬಿತ್ತಿ
ಜಗದೆವೆಗಳ ತೆರೆಯುತ
ಕಮಲಂಗಳ ಬಿರಿಯುತ.

ತಿರೆಗೆ ಜೀವಕಳೆಯ ನೀಡಿ
ಜನಗಳೆದೆಗೆ ರಸವನೂಡಿ
ಮೂಡಿ ಬಾ, ಮೂಡಿ ಬಾ,
ಬೇಗ ಬಾ, ಬಾ, ಬಾ!
ತೊಳಗಿ ಬಾ, ಬೆಳಗಿ ಬಾ,
ಜಗದ ಕಣ್ಣೆ ಬಾ, ಬಾ;

೨

ಮುಗಿಲಿನಲಿ ಕೆಂಪಹೊಯ್ದು
ದಿನಮಣಿಯೆ ಬಾ, ಬಾ;
ಬೆಳಕಿನಲಿ ಬಲೆಯ ನೆಯ್ದು
ತಿಮಿರಾರಿ ಬಾ, ಬಾ;
ಬಾನ ಹೆಣ್ಣನೊಲಿಯುತೊಮ್ಮೆ
ನೆಲದ ಹೆಣ್ಣನೊಲಿಯುತೊಮ್ಮೆ
ಒಮ್ಮೆ ಬನದ ದೇವಿಯು
ಒಮ್ಮೆ ಜಲದ ದೇವಿಯು
ಸರಸದಿಂದಲೊಲಿಯುತಾಡಿ
ಕಿರಣ ಮಾಲೆಗಳನು ಸೂಡಿ
ಮೂಡಿ ಬಾ, ಮೂಡಿ ಬಾ;
ಬೇಗ ಬಾ, ಬಾ, ಬಾ!
ತೊಳಗಿ ಬಾ, ಬೆಳಗಿ ಬಾ,
ಜಗದ ಕಣ್ಣೆ ಬಾ, ಬಾ.

[ಹಾಡನ್ನು ನಿಲ್ಲಿಸಿ, ಮೂಡಣದೆಸೆಯನ್ನು ನೋಡಿ]

ಮೆಲುನಡೆಯನಿಡುತಲರುಣೋದಯವು ಮೂಡಣದ
ಬಾನೆಡೆಯೊಳೋಕುಳಿಯ ಚೆಲ್ಲುತ್ತ ಮೂಡುತಿದೆ,
ಹಸುರಿನೊಳು ಮುತ್ತುಗಳ ಹೊಂಬೆಳಗ ಸೂಸಿ.

ಹಿಂಜರಿದು ಹಿಮ್ಮೆಟ್ಟಿ ದಿಕ್ಕುಗಳಲಡಗುತಿಹ
ಕತ್ತಲೆಯ ನೊತ್ತದಿಂ, ದೆಸೆ ದೆಸೆಗಳಂ ತೀವಿ
ನಲಿವ ಸರುಗೆಂಪಿನಿಂ, ಪೆಂಪಿನಿಂ; ವೈ ಸೋತ
ದಳದಂತೆ ಬೆದರಿ ಹಿಂಜರಿದು ಮರೆಯಾಗುತಿಹ
ಮಂಜಿನಿಂ; ನೇಸರಾಗಮನದಲಿ ಕಣ್ದೆರೆದು
ಮೈ ಕೊಡವಿ ಮರದಿಂದ ಮರದೆಡೆಗೆ ಸಂತಸದಿ
ಹಾರುತ್ತ ಸುಣ್ದನಿಯ ಬೀರುತಿಹ ಹಕ್ಕಿಗಳ
ಗೇಯದಿಂಚರದಿಂದ; ನಲವಿಂದ ಸುಳಿ ಸುಳಿದು
ತಳಿರ ಕಾವಣಗಳಲಿ ಒಯ್ಯೊಯ್ಯನಾಡುತಿಹ
ಕುಳಿರೆಲರಿನಿಂಪಿನಿಂ ; ಎಲರಿನಲಿ ತಲೆದೂಗಿ
ಸರುಗಂಪನೀಡಾಡಿ ಬಿರಿಯುತಿಹ ಪೂಗಳಿಂ;
ಪೂಗಳಲಿ ಒಂಡುಣಲು ಹಾರೈಸಿ, ಸುತ್ತಿ
ಮೊರೆಯುತಿಹ ಸೊಕ್ಕಿದಳಿನಿಕರದಿಂ; ಚಿತ್ತರದ
ಬಾನಿನಿಂ; ಬಾನಿನಲಿ ತೇಲುತಿಹ ಮುಗಿಲಿನಿಂ;
ರಮ್ಯಾರುಣೋದಯವದೆಂತು ಚೆಲ್ವಾದುದು!
ಸೃಷ್ಟಿಕರ್ತನನೆಮಗೆ ಸಾಧಿಸಲು, ತೋರಿಸಲು,
ಸೃಷ್ಟಿಯಿದು ಸಾಲದೇ? ಸೃಷ್ಟಿಸೌಂದರ್ಯಮಿದು
ಸಾಲದೇ? ಪಳವಾತದೇಕೆ? ಬಜ್ಜೆಯೇಂ
ತೋರ್ಕುಮೋ ಎದೆಯರಿವು ತೋರದಾ ಪರಮನಂ?—
ಇಷ್ಟು ಮುಂಜಾನೆಯೊಳು ಹಾಡುತ್ತ ಬರುವರಾರು?

[ರಂಗದ ಒಂದು ಪಕ್ಕಕ್ಕೆ ದೃಷ್ಟಿಸಿ ನೋಡುವನು. ರೈತನೊಬ್ಬನು ಹಾಡುತ್ತ ಬರುವನು]

ರೈತ— ನೇಗಿಲ ಯೋಗಿಯು ನಾನು;
ಮಣ್ಣಿನ ಭೋಗಿಯು ನಾನು!
ಕೆರೆಗಳ ತೊರೆಗಳ ಗೆಳೆಯನು ನಾನು,

ಹೊಲಗಳ, ಬನಗಳ ದೊರೆ ನಾನು.
ಹೊಯ್ಯುವೆ, ಗೆಯ್ಯುವೆ, ಕೊಯ್ಯುವೆ ನಾನು,
ಉಣ್ಣುವೆ, ಉಣಿಸೀಯುವೆ ನಾನು.
ನೇಗಿಲ ಗೆರೆಯೇ ತೋರುವುದೆನಗೆ
ಮುಕ್ತಿಯ ಹಾದಿಯನು;
ವೇದಗಳೆಲ್ಲಾ ನೆಗೆನೆಗೆದರಿಯದ
ಅಂತ್ಯದ ಆದಿಯನು.
ನನ್ನಿಯನರಿಯುವೆ ಕರ್ಮದಲಿ!
ಸೊಗವನು ಕಾಣುವೆ ಧರ್ಮದಲಿ;
ಬದುಕಿ ಬಾಳಿ ನಾ ಗೆಯ್ಯುವೆ ನಲಿಯುವೆ
ಇಹಪರಗಳ ನಾ ಸಾಧಿಸುವೆ.
ಬದುಕಿ, ಬಾಳಿ, ಕರ್ತವ್ಯವ ಮಾಡಿ,
ಮೇಲಾಗುವುದನು ಬೋಧಿಸುವೆ!
ನೇಗಿಲ ಯೋಗಿಯು ನಾನು!
ಮಣ್ಣಿನ ಭೋಗಿಯು ನಾನು!

[ಹಾಡನ್ನು ನಿಲ್ಲಿಸಿ ತಾನು ತಂದ ಹಣ್ಣು ಕಾಯಿಗಳನ್ನು ಕೆಳಗಿಟ್ಟು]

ತಿರೆಯ ಪೊರೆದವರೆನ್ನ ಸಹಕರ್ಮಿಗಳು, ಧರ್ಮಿಗಳು!
ನನ್ನವರ ಬಲದಿಂದಲೇ ದೊರೆಗಳಾಳಿದರು,
ಬಾಳಿದರು, ರಣವೀರರರಿಗಳನು ಹೂಳಿದರು;
ಕಬ್ಬಿಗರು ನಲ್ಗಬ್ಬಗಳ ಬರೆದು ಹಾಡಿದರು;
ಶಿಲ್ಪಿಗಳು ಕಲ್ಲಿನಲಿ ಕತೆಗಳನು ಕೆತ್ತಿದರು!
ಮಣ್ಣಾದ ನೇಗಿಲಿನಾಶ್ರಯದಿ ಬೆಳೆದಿಹುದು;
ಉಳಿದಿಹುದು ನಮ್ಮ ನಾಗರಿಕತೆಯು. ರೈತರೇ
ಭೂಮಿಗಿಳಿದಿಹ ಕಾಮಧೇನುಗಳು; ರೈತರೇ
ಧರೆಯೊಳಿಹ ಜಂಗಮ ಕಲ್ಪವೃಕ್ಷಗಳು;

ಜಲಗಾರ—ಮುಂಜಾನೆಯೊಳಗೆಲ್ಲಿ ಹೋಗುತಿಹೆ ರೈತ?

ರೈತ— (ಹಿಂತಿರುಗಿ ನೋಡಿ)

ಓಹೋ, ನೀನರಿಯೆಯಾ? ಇಂದು ನಮ್ಮೂರ
ಶಿವಗುಡಿಯ ಜಾತ್ರೆ! ಬರುವುದಿಲ್ಲವೆ ನೀನು?
ತೇರೆಳೆಯಲೆಂದನಿಬರೂ ಬರುತಿಹರು.

ಜಲಗಾರ—ನನಗೇಕೆ ಶಿವಗುಡಿಯ ಜಾತ್ರೆ? ಜೋಯಿಸರು
ದೇಗುಲದ ಬಳಿಗೆನ್ನ ಸೇರಿಸರು.

ರೈತ— ದೂರದಲ್ಲಿಯೇ ನಿಂತು ಕೈಮುಗಿದು ಬಾ.

ಜಲಗಾರ—ಕರ್ಮವಾರಾಧನೆಯು, ಸೇವೆಯೇ ಪೂಜೆ.
ನನ್ನ ಭಾಗಕೆ ಪೊರಕೆಯಾರತಿಯು. ಗುಡಿಸುವುದೆ
ನನ್ನ ದೇವರ ಪೂಜೆ!—ನಿನ್ನೆ ದೇಗುಲದೆಡೆಗೆ
ಪೋದೆನ್ನ ಕಂದನಂ ಬೈದಿರಿದು ನೂಕಿದರು.
ಶಿವಗುಡಿಯ ಶಿವನು ಜೋಯಿಸರ ಶಿವನಂತೆ;
ನನ್ನ ಶಿವನೀ ಮಣ್ಣಿನಲ್ಲಿಹನು. ನನ್ನ ಶಿವ
ಕೊಳೆತ ಕಸದೊಳಗಿಹನು. ಕಪ್ಪುರದೊಳಿಲ್ಲ;
ಮಂಗಳಾರತಿಯೊಳಿಲ್ಲ; ಹೂವುಗಳಲಿಲ್ಲ.
ಯಾವೆಡೆಯೊಳಾನಿಹೆನೊ ಅವನಲ್ಲಿಯೇ ಇಹನು,
ನನ್ನದೆಯೆ ದೇಗುಲವು; ನನ್ನೊಲ್ಮೆಯದು ಪೂಜೆ.
ನಾನೆಲ್ಲಿ ಭಕ್ತಿಯಿಂ ಕೈಮುಗಿವೆನೋ ಅಲ್ಲಿ
ತಾನಿಹನು. ನಾನೆಲ್ಲಿ ಸತ್ಕರ್ಮವೆಸಗುವೆನೊ
ಅಲ್ಲಿ ಮೈದೋರುವನು. ಶಿವಗುಡಿಯದೆನಗೇಕೆ?—
ನೀನೇನು ಶಿವಗುಡಿಗೆ ತೆರಳುತಿಹೆಯಾ?

ರೈತ— ಹೌದು; ಶಿವನ ನೋಡಲು ಗುಡಿಗೆ
ಹೋಗುತಿಹೆನು. ಅದಕಾಗಿ ಹಣ್ಕಾಯಿಗಳನೆಲ್ಲ
ತಂದಿರುವೆ; ನೋಡಿಲ್ಲಿ. (ತೋರುವನು)

ಜಲಗಾರ— ಶಿವನ ಕಾಣಲು ನೀನು
ಗುಡಿಗೆ ಹೋಗುವೆಯೇನು? ನಿನ್ನ ನೇಗಿಲ ಗೆರೆಯು
ದಿವ್ಯದೇವಾಲಯದಿ ಶಿವನ ಕಾಣೆಯ ನೀನು?
ಉಳುವಾಗ, ನೆಡುವಾಗ ಪೂಜೆಮಾಡುವೆ ನೀನು.
ದೇಗುಲದ ಪೂಜಕನು ಬೈಗಿನಲಿ ಬೆಳಗಿನಲಿ
ಪೂಜಿಸಿದರೇನಂತೆ? ನಮ್ಮ ಜೀವವೆ ನಿಚ್ಚ
ಪೂಜೆ. ನಮ್ಮ ಕರ್ಮವೆ ನಿತ್ಯಯೋಗ.

(ರೈತನು ತನ್ನ ಪೂಜಾ ಸಾಮಗ್ರಿಗಳನ್ನು ಎತ್ತಿಕೊಳ್ಳುವನು)

ಜಲಗಾರನೆಂದುದಿದು ವೇದ ನುಡಿಯಲ್ಲ;
ತೆರಳು, ನೇಗಿಲಯೋಗಿ, ಶಿವನ ಪೂಜಿಸು ಹೋಗು.

(ಗುಡಿಸುವನು)

ರೈತ— ಕೇಳಿಲ್ಲಿ ಜಲಗಾರ, ಇಂದು ಜಾತ್ರೆಯ ದಿವಸ,
ಇಂದು ಸುಗ್ಗಿಯ ಹಬ್ಬ; ಇಂದು ಆಟದ ದಿನವು.
ಎಲ್ಲರೂ ಸಂತಸದಿ ಶಿವಪೂಜೆಯನು ಮಾಡಿ
ನಲಿಯುವರು. ನೀನೂ ಬಾ.

ಜಲಗಾರ— ಹೌದು ನೇಗಿಲಯೋಗಿ
ಲೋಕ ನಗಬೇಕಾದರಾರಾದರಳಬೇಕು! (ಗುಡಿಸುವನು)

ರೈತ— (ಸ್ವಗತ) ಸೊಗದ ಮೋರೆಯನೆ ಕಂಡರಿಯನೀ ಜಲಗಾರ.
ಪೂಜೆಯೆಂಬುದನರಿಯ; ದೇವನೆಂಬುದನರಿಯ;
ಹುಟ್ಟುಗುಣ ಸುಟ್ಟೊಡೆಯು ಹೋಗುವುದೆ?

(ಹಾಡುತ್ತಾ ಹೋಗುವನು)

ಜಲಗಾರ—ಭೂಮಿಯೊಳು ಹುಟ್ಟುಕುರುಡರಿಗಿಂತ ಕಣ್ಣುಳ್ಳ
ಕುರುಡರೆನಿತೊಳರು? ಬನದ ಕೆಂದಳಿರಲ್ಲಿ
ಬಗ್ಗಿಸುವ ಕೋಗಿಲೆಯೆ ನಿನ್ನ ಪುಗಲಿಂಚರದಿ
ಪರಮವಾಣಿಯ ಕೇಳದವಗೆ ಕಿವಿಯಿದ್ದರೇಂ?

ಎಲೆ ರಮ್ಯವನಗಳಿರ, ನಿಮ್ಮ ಸೌಂದರ್ಯದಲಿ
ಪರಮಾತ್ಮನಂ ಕಾಣದವಗಿದ್ದರೇಂ ಕಣ್ಣೆರಡು?
ಜಗದ ದೇಗುಲದಲ್ಲಿ ಜಗದುದಯ ಕಾರಣನ
ಕಾಣದವನೆಂತು ಕಾಣ್ಬನು ಶಿವನ ಗುಡಿಯಲ್ಲಿ?
ತಣ್ಗದಿರ ಬೆಂಗದಿರಸರಿಲುಗಳೆ ಸೊಡರುಗಳು!
ಸುಮಮಾಲೆಯುಲರುಗಳ ಚೆಲ್ಲುತಿರುವಡವಿಗಳು!
ಮುನ್ನೀರು ತೊರೆ ಕೆರೆಗಳೇ ಪಂಚಪಾತ್ರೆ;
ಚಿತ್ತರದ ಬಾಂದಳವೆ ಗೋಪುರಂ! ಹೊಳೆಗಳಲಿ
ಹರಿವ ಸಲಿಲವೆ ತೀರ್ಥ; ಸುಮಗಂಧವೇ ಧೂಪ!
ಹಕ್ಕಿಗಳಿಂಚರವೇ ಸ್ವರಮೇಳ! ಎದೆಯೊಲವೆ
ವರ ಧರ್ಮಶಾಸ್ತ್ರ. ಭಕ್ತಿಯೇ ದಿವ್ಯಾತ್ಮ
ಯಜ್ಞ. ಎದೆಯ ಮಣೆಯೇ ಯಜ್ಞಶಾಲೆ!
ಸಲ್ವಾತುಗಳೆ ಮಂತ್ರ ಘೋಷ; ನೀತಿಯೇ
ವರ ವೇದ. ತಿರೆಗಿಂತ ದೇಗುಲವದೊಳವೇ?

[ಹಾಡುವನು]

ಗುಡಿಯೊಳಗಿರಲು ದೇವ
ಒಡೆಯನಾರೀ ಜಗವ ಕಾವ?
ವಿಗ್ರಹದೊಳಿರೆ ರಾಮ
ಯಾರದೀ ಲೋಕದಾರಾಮ?
ಮೂಡಣದೊಳಿಹನು ಹರಿ;
ಪಡುವಲೊಳಿಹನು ಅಲ್ಲಾ!
ಹೃದಯದೊಳು ನೀನೋಡೆ
ಸಲೆ ವಿಚಾರವ ಮಾಡೆ
ಅಲ್ಲಿರುವನು ಕರೀಮ!
ಅಲ್ಲೆ ತೋರ್ಪನು ರಾಮ!

ಜಗದ ಮನುಜರಿಗೆಲ್ಲಾ
ಬ್ರಹ್ಮನಾಗಿಹನಲ್ಲಾ!
ಅಲ್ಲ ರಾಮರ ಕಂದ-
ನಾಗಿರುವನು ಕಬೀರ!
ಆತನೇ ಎನಗೆ ಗುರು
ಮೇಣಾತನೇ ಪೀರ?

[ಇಬ್ಬರು ಪಾರ್ಶ್ವರು ಪ್ರವೇಶಿಸುವರು.]

**ಮೊದಲನೆ**—ಕೊಳಲಿನಿನಿದನಿಯಂತೆ ಸವಿಗೊರಲಿನಿಂದೊಗೆದ
ಗಾಯನವದೆನಿತಿಂಪು! ಹಾಡಿದವರಾರು?

**ಎರಡನೆ**— ಯಾರೊ ದಿವ್ಯಾತ್ಮನಿರಬೇಕು. ಮಧುರತಮ!
ಗಾಯನವು ಅಮಲತಮ ಹೃದಯದಿಂದಲ್ಲದೆ
ಹೊರಹೊಮ್ಮಲರಿಯದು! ಗುಡಿಯಬಳಿಯಾದರೂ
ಹಾಡಿದನೇ!

**ಮೊದಲನೆ**—(ಜಲಗಾರನನ್ನು ನೋಡಿ)
ಜಲಗಾರ ಹಾಡಿದವರಾರೊ?

**ಜಲಗಾರ**—(ಕೈಮುಗಿದು)
ನಾನೇ ಮಹಾಸ್ವಾಮಿ: ತಮ್ಮ ಅನುಗ್ರಹದಿಂದ.

**ಎರಡನೆ**— ಅವನಂತೆ! ಒಡಿಯ ಸಟೆ! ಹೋಗೋಣ ಬಾ.

**ಮೊದಲನೆ**—ಸಂಗೀತವನಿತೇನು ಮನಮೋಹಿಪಂತೆ!
ಇರಲಿಲ್ಲ. ಗಾನದೇವಿಯು ಹೀನ ಜಲಗಾರ-
ನನ್ನೊಲಿಯುವಳೆ? ಎಂದಿಗೂ ಇಲ್ಲ.

**ಎರಡನೆ**— ಶೂದ್ರರೊಳು ಕವಿವರ್ಯರುದಿಸುವರೆ? ಹುಟ್ಟುವರೆ
ಪಂಡಿತರು?
ಜನಿಸುವರೆ ಶಿಲ್ಪಿಗಳು? ಗಾಯಕರು, ಯೋಗಿಗಳು
ಮೂಡುವರೆ? ಹೊತ್ತಾಯ್ತು ಹೋಗೋಣ.

ಮೊದಲನೆ — ಇರಲಿ,

ಇವನ ಹಾಡೆನಿತಿಂಪು ತೋರಿದರು, ಗುಡಿಯುಬಳಿ
ಬೇಡ! ಕೇಳಲ್ಲಿ! ಶಿವಗುಡಿಯು ಗಂಟೆಗಳು! (ಹೋಗುವರು)

[ಜಲಗಾರನು ಅವರನ್ನೇ ನೋಡಿ ನಗುತ್ತಾ ಗುಡಿಸಲಾರಂಭಿಸುವನು. ಜಾತ್ರೆಗೆ ಹೋಗುವ ಜನಗಳ ಗುಂಪು ಹೋಗುವುದು. ಯುವಕನೊಬ್ಬನು ಗುಡಿಸುವವನನ್ನು ನೋಡಿ ನಿಲ್ಲುವನು.]

ಯುವಕ—ಜಗದುದಯ ಕಾರಣನೆ, ಹೇ ಜಗದವ್ಯಕ್ತ
ಮೂರ್ತಿಯೇ: ನಿನ್ನ ಮಹಿಮೆಯನರಿವರಾರು?
ನಿನ್ನ ಲೀಲೆಯ ತಿರುಳ ಹೊಕ್ಕು ಮುಟ್ಟಿದರಾರು?
ಯುಗಯುಗಗಳಿಂ ಬಿಡದೆ ತಿಳಿಯಾಳದಾಗಸದಿ
ತೊಳಗುತಿಹ ಸೂರ್ಯನನು ಮುಂಬೆಳಗಿಸಲಿ ಮೂಡಿ
ಬೈಗಿಸಲಿ ಮುಡಿವ ಕಿರಿಯ ಹೂ ನಗುವಂತೆ
ಮಾಡಿರುವ ನಿನ್ನ ಮಾಯೆಯ ಮೈಮೆಯೆಂತು?
ಕೆಲವರಾಡುವರುಳಿದವರು ಕೆಲಸಮಾಡುವರು;
ಯಾರ ಸಂತಸವಾರ್ಗೆ? ಉದ್ದೇಶವೇನಿಹುದು?
ದಿನದಿನವು ಎಡೆಬಿಡದೆ ಗೆಯ್ಯುತಿಹ ಜಲಗಾರ-
ನೀತಂಗೆ ಯಾವ ಫಲವನು ಎಲ್ಲಿ ಮುಚ್ಚಿರುವೆ?
ಮಹಿಮೆಯಾವುದು ಕಸದೊಳಡಗಿಹುದು?

[ಜಲಗಾರನನ್ನು ಸಂಬೋಧಿಸಿ]

ಜಲಗಾರ,
ಜಾತ್ರೆಯೊಳು ಕೂಡ ನಿನಗೆ ಬಿಡುವಿಲ್ಲವೆ?
ನಾಳೆ ಗುಡಿಸುವೆಯಂತೆ; ಬರಬಾರದೇ ಈಗ?
ಒಂದು ದಿನವಾದರೂ ವಿಶ್ರಾಂತಿಯಿರಲಿ;
ಬಾ, ಹೋಗೋಣ!

ಜಲಗಾರ— ವಿಶ್ರಾಂತಿಯೊಂದು ದಿನ!

ಕರ್ಮ ಕಾಲದಂತ್ಯದವರೆಗೆ! ಒಂದುದಿನ

ಜಾತ್ರೆ! ಅದಕಾಗಿ ಯುಗಯುಗದ ಯಾತ್ರೆ!

ತೆರಳು, ಯುವಕನೆ ತೆರಳು; ಶಿವನ ಗುಡಿಯೊಳಗರಸು;

ನಾನು ಪುಡಿಯೊಳಗವನನರಸುವೆನು.

[ಜಲಗಾರನು ಗುಡಿಸುವನು. ಯುವಕನು ಅವನನ್ನೇ ಸ್ವಲ್ಪ ಹೊತ್ತು ದೃಷ್ಟಿಸಿ ನೋಡಿ ಅವನು ಕಾಣದಂತೆ ಅವನಿಗೆ ಕೈಮುಗಿದು ಹೋಗುವನು. ತಿರುಕನೊಬ್ಬನು ತಿರಿಯುತ್ತಾ ಬರುವನು. ಅವನು ಕುರುಡ, ಕುಂಟ.]

ತಿರುಕ— (ರಾಗವಾಗಿ) ಧರ್ಮರೇ!

ದೇವರೇ! ತಾಯ್ತಂದೆ! ಕಾಸುಕೊಡಿರಪ್ಪಾ!

ಹೊಟ್ಟೆಗಿಲ್ಲದೆ ಹಸಿದು ಸಾಯುತಿಹೆನಪ್ಪಾ!

ಕಣ್ಣಿಲ್ಲ! ಕಾಲಿಲ್ಲ! ಧರ್ಮರೇ! ತಾಯ್ತಂದೆ!

[ಭಟ್ಟನೊಬ್ಬನು ಮಂತ್ರ ಹೇಳುತ್ತಾ ವೇಗವಾಗಿ ಬರುವನು.]

ಭಟ್ಟ— (ರಾಗವಾಗಿ)

ತ್ವಮೇವ ಮಾತಾ ಚ ಪಿತಾ ತ್ವಮೇವ!

ತ್ವಮೇವ ಬಂಧುಶ್ಚ ಸಖಾ ತ್ವಮೇವ!

ತ್ವಮೇವ ವಿದ್ಯಾದ್ರವಿಣಂ ತ್ವಮೇವ!

ತ್ವಮೇವ ಸರ್ವಂ ಮಮದೇವ ದೇವ!

[ಭಿಕ್ಷುಕನು ಅವನನ್ನು ಅಡ್ಡಗಟ್ಟಿ.]

ತಿರುಕ— ಕಣ್ಣಿಲ್ಲ, ಧರ್ಮರೇ ಕಾಸುಕೊಡಿರಪ್ಪಾ!

ಹೊಟ್ಟೆಗಿಲ್ಲದೆ ಹಸಿದು ಸಾಯುತಿಹೆನಪ್ಪಾ!

ಭಟ್ಟ— (ಕೋಪದಿಂದ)

ನೀ ಸತ್ತರೆನಗೇನೊ? ಮಡಿಬಟ್ಟೆ ಮುಟ್ಟುವೆಯ?

ಅದಕೆ ದೇವರು ನಿನ್ನ ಕಣ್ಣಿಂಗಿಸಿದ್ದು!

[ತ್ವಮೇವ ಮಾತಾಚ ಎಂದು ಹೇಳುತ್ತಾ ಹೋಗುವನು.]

ಶಿಲ್ಪಕ— (ಹತಾಶನ ರೋಷದಿಂದ)

ನೀನೇಕೆ ಗುಡಿಯೊಳಗೆ ಸೇರಿರುವೆಯಪ್ಪಾ
ಪರಮಾತ್ಮ? ಗುಡಿಗಳಿವು ಪಾಪಿಗಳ ಭೋಗಿಗಳ
ಗೂಡುಗಳು! ಪೂಜೆಯೆಂಬುದು ಧರ್ಮ ಬುದ್ಧಿಯನು
ಜೋಗುಳದಿ ಮಲಗಿಸುವ ಕಾಳಮಂತ್ರವು, ದೇವ!
ಕಾಪಾಡು! ಕಾಪಾಡು! (ಒರಗುವನು)

[ಇಬ್ಬರು ತರುಣರು ಮಾತಾಡಿಕೊಳ್ಳುತ್ತಾ ಬರುವರು.]

ಒಂದನೆಯ ತರುಣ—ದೇಗುಲದೊಳವಿತುಕೊಂಡಿಹನಂತೆ ಪರಶಿವನು!

ಜಗವೆಲ್ಲ ದೇವನಿಹ ಗುಡಿಯಲ್ಲವೇ ಗೆಳೆಯ?
ಪೂರ್ವಿಕರ ಮೂಢತನಕಾದಿಯೆಂಬುವುದೆಲ್ಲಿ?
ಅಂತವೆಂಬುವುದೆಲ್ಲಿ? ಹೇಳುವುದು ಒಂದು,
ಮಾಡುವುದು ಮತ್ತೊಂದು! ಜಗದೊಡೆಯನೆಲ್ಲಿಯುಂ
ಇರುವನೆಂಬರು ಒಮ್ಮೆ! ಗುಡಿಯಲರಸುವರೊಮ್ಮೆ!
ನಿರಾಕಾರನವನೆಂದು ಸಾರುವರು ಒಮ್ಮೆ;
ಮೂರ್ತಿಗಳ ಮಾಡಿ ಆರಾಧಿಸುವರಿನ್ನೊಮ್ಮೆ!
ಒಂದುಸಲ ಸರ್ವರೊಳು ಅವನಿರುವನೆನ್ನುವರು;
'ಹೊಲೆಯ ನೀ ದೂರವಿರು' ಎಂದೆಂಬರಿನ್ನೊಮ್ಮೆ!
ನುಡಿಗೂ ನೆಗಳ್ತೆಗೂ ಸಂಬಂಧವೇ ಇಲ್ಲ!
ಇದೆ ನಮ್ಮ ಭಾರತಾಂಬೆಯ ದುರ್ಗತಿಗೆ ಕಾರಣವು.
ಬಡಜನರ ಕಣ್ಣೆತ್ತಿ ನೋಡದಿಹ, ಮರುಗದಿಹ,
ಹಾಳು ಪೂಜೆಯದೇಕೆ? ಹಸಿದ ಜನಗಳಿಗೆ
ಕೊಡರೊಂದು ಕಾಸ; ತಣ್ಣಗಿಹ ಕಲ್ಲುಗಳ
ಮೇಲೆ ಎಣ್ಣೆಯನು ಬೆಣ್ಣೆಯನು ಸುರಿಯುವರು.
ಕರ್ಪೂರದಾರತಿಯ ಬೆಳಗುವರು ವಿಗ್ರಹದ
ಮುಂದೆ ತಲೆಬಾಗಿ. ಸತ್ತ ದೇವರ ಪೂಜೆ

ಮಾಡುವರು. ಜೀವದ ದರಿದ್ರ ನಾರಾಯಣರ
ಸೇವೆಯಲ್ಲವೆ ಪರಮ ಪೂಜೆ?

**ತಿರುಕ**— ಧರ್ಮ್ಮರೇ!
ಕಣ್ಣಿಲ್ಲ ಹಸಿದಿಹೆನು ಸಾಯುತಿಹೆನಪ್ಪಾ!
ಪುಣ್ಯಾತ್ಮರೇ ತಾಯ್ತಂದೆ ಕಾಸುಕೊಡಿರಪ್ಪಾ!

**ಎರಡನೆಯ ತರುಣ**—ಕಾಸಿದೆಯೋ ನಿನ್ನ ಬಳಿ?

**[ಎಂದು ತಟಕ್ಕನೆ ಮೊದಲನೆಯ ತರುಣನ ಕಡೆಗೆ ತಿರುಗುವನು. ಜೇಬಿನಲ್ಲಿ ಹಣದ ಸದ್ದಾಗುವುದು.**

**ಮೊದಲನೆಯ ತರುಣ**— ಹಾಗಲ್ಲ, ಮಿತ್ರ!
ಕೊಡುವುದನು ನೋಡಿ ಕೊಡಬೇಕು!
"ನರಜನುಮವತ್ಯಧಿಕವದರೊಳು
ಗುರುಹಿರಿಯರಿವರೆಂದು ದಾನ
ಕ್ಕರುಹರಿವರಲ್ಲೆಂದು ನೋಡದೆ ಮೂಢಮಾರ್ಗದಲಿ
ಕರೆದಪಾತ್ರಂಗಿತ್ತು ಪಾತ್ರನ
ಪರಿಹರಿಸಲೀಯೆರಡರಿಂ ಸಂ
ಹರಣವೈದುವುದಾರ್ಜಿಸಿದ ಧನವರಸಕೇಳೆಂದ!"
ಎಂಬ ವಿದುರನ ನೀತಿಯರಿಯೆಯಾ ನೀನು?
ಇವನೇನು ಕುರುಡನೇ? ಇವನು ಬಲು ಸೋಮಾರಿ!
ನೋಡೆನಿತು ಬಲಶಾಲಿಯಾಗಿಹನು? ನೋಡು!
ದುಡಿಯಬಾರದೆ ಇವನು? ಭಿಕ್ಷುಕರ ದೆಸೆಯಿಂದ
ದೇಶವೇ ಹಾಳಾಯ್ತು! **(ಕುರುಡನ ಬಳಿ ಸಾರಿ)**
ಲೋ! ನಿನ್ನ ಕಣ್ಣು
ಕುರುಡೇನೊ ಠಕ್ಕ!

**(ಕಣ್ಣಿನ ರೆಪ್ಪೆ ಎಳೆದು ನೋಯಿಸುವನು)**

ತಿರುಕ— (ಕೂಗಿ ಗೋಳಾಡಿ)

ಪರದೇಶಿಯಪ್ಪಾ!

ಕಣ್ಣಿಲ್ಲವಪ್ಪಾ! ನಿನ್ನ ದಮ್ಮಯ್ಯಪ್ಪಾ!
ನಿನ್ನ ಕಾಸೆಸಗೆ ಬೇಡಪ್ಪಾ! ಕಣ್ಣು
ಚುಚ್ಚಬೇಡಪ್ಪಾ!
(ಜಲಗಾರನು ಓಡಿ ಬಂದು ತರುಣನನ್ನು ಎಳೆದು)

ಜಲಗಾರ— ಬಿಡಿರಪ್ಪಾ! ಪಾಪ,
ಹೊಟ್ಟೆಗಿಲ್ಲದೆ ಬಿದ್ದು ಸಾಯುವವಗೇತಕೀ
ಗೋಳು?

ಮೊದಲನೆಯ ತರುಣ— (ಕೋಪದಿಂದ)
ಸೊಕ್ಕೇನೊ ನಿನಗೆ?......ತಿಂದ ಸೊಕ್ಕೇ?
ಮೈ ಮುಟ್ಟುವೆಯ ಬಂದು!

(ಅವನನ್ನು ಒದ್ದು ನೂಕಿ ಹೋಗುವರು)

ಜಲಗಾರ— ದೇವರೇ, ದೇವರೇ!
ಶತ್ರುಗಳ ಕಾಟವಾದರು ಬೇಕು; ನಮಗಾಗಿ
ಮಿತ್ರರೆಂಬುವ ನೆವದಿ ಮರುಕ ತೋರುವ ಜನರ
ಕೃತ್ರಿಮದ ಕಾಟ ಬೇಡ! ಭಟ್ಟನಾದರು ಬೈದು
ಹೋದ. ಬಡಜನರಿಗಾಗಿ ಮರುಗುವ ಇವರು
ಭಿಕ್ಷುಕನ ಕಣ್ಣಿರಿದು, ಒದ್ದು ತೆರಳಿದರು!
(ಮರುಕದಿಂದ) ನಿನಗೇನು ಬೇಕಣ್ಣಾ!

ತಿರುಕ— ಸಾಯುತಿಹೆನಪ್ಪಾ,
ಹೊಟ್ಟೆಗಿಲ್ಲದೆ! ತುತ್ತು ಅನ್ನ ಹಾಕುವೆಯಪ್ಪಾ!

ಜಲಗಾರ—ಬಡವರಿಗೆ ಬಡವರಲ್ಲದೆ ಬೇರೆ ಗತಿಯುಂಟೆ?
ಲೋಕದಲಿ ಕಂಬನಿಯನೊಂದನೊರಸಿದ ನರನೆ
ಧನ್ಯ! ಸಿಟ್ಟುಸಿರನೊಂದ ಸಂತೈಸುವನೆ

ಮಾನ್ಯ! ಹಸಿದ ಹೊಟ್ಟೆಗೆ ಮುರುಗಿ ತುತ್ತೊಂದ
ನೀಡುವನೆ ಶಿವಗಣೆಯು! ಹೆರರ ಗೋಳನು ಕಂಡು
ಎದೆಬೆಂದು, ಬಟ್ಟೆಗೆಟ್ಟೊಬ್ಬನನು ಕೈಹಿಡಿದು,
ಜೀವನದ ಕರಿಮುಣಿಸು ಕತ್ತಲಲಿ ಕಿರಣವೊಂ-
ದನು ತಂದು ಭರವಸೆಯನೀಯುವನೆ ಋಷಿಯು!
ಅದೆ ಪೂಜೆ! ಅದೆ ಧರ್ಮ! ಅದೆ ಯೋಗ! ಅದೆ ಭಕ್ತಿ!
ಎದ್ದೇಳು ಭಿಕ್ಷುಕನೆ, ನನ್ನನ್ನದೊಳು ಮುಷ್ಟಿ
ನಿನಗಿಕ್ಕಿ ಶಿವಪೂಜೆ ಮಾಡುವೆನು. ನೀನೆನ್ನ
ಸೋದರನು, ನೀನೆನ್ನ ದೇಗುಲವು! ನೀನೆನಗೆ
ಪರಶಿವನು! ಏಳು; ಮೇಲೇಳು ಸೋದರನೆ!

[ತಿರುಕನನ್ನು ಕೈಹಿಡಿದು ಮೆಲ್ಲಗೆ ನಡೆಸಿಕೊಂಡು ಹೋಗುವನು]

(ಪರದೆ ಬೀಳುವುದು)

---

## ದೃಶ್ಯ ೨

[ಸಾಯಂಕಾಲ. ಭೂದೇವಿಯು ಬಂದು ಹಾಡುವಳು.]

೧

ದೂರದಿಂದ ಮೆಲುನಡೆಯಲಿ

ಸಂಜೆವೆಣ್ಣು ಬರುವಳು–ಬಹು

ದೂರದಿಂದ ಬರುವಳು!

ನೀಲಗಗನದಾಚೆಯಿಂದ

ನಲಿದು ತೇಲಿ ಬರುವಳು–ತವ

ರೂರಿನಿಂದ ಬರುವಳು.

೨

ಸರಸದಿಂದ ತೊರೆಯ ತಡಿಯ

ಮೇಲೆ ನಡೆದು ಬರುವಳು–ಸುಖ

ಶಾಂತಿಗಳನು ತರುವಳು.

ಸೆರಗಿನಿಂದ ಗಿರಿವನಗಳ

ಮುಸುಗುತೇರಿ ಬರುವಳು–ಮನ

ಮೋಹಿಸುತ್ತ ಬರುವಳು.

೩

ಹಾಡುವಾ ವಿಹಂಗಮಗಳ

ಗೂಡಿಗಟ್ಟಿ ಬರುವಳು–ನಲಿ

ದಾಡಿಯಾಡಿ ಬರುವಳು.

ಗೆಜ್ಜೆಗಳನು ಗಲಿರೆನಿಸುತ

ಹಜ್ಜೆಯಿಡುತ ಬರುವಳು–ನಸು

ಲಜ್ಜೆಯಿಂದ ಬರುವಳು.

೪

ವ್ಯೋಮವವಳ ಮಣಿಕಿರೀಟ,
ಭೂಮಿ ಪಾದ ಪೀಠವು—ವನ
ಧಾಮ ಹಸುರಿಸುಡುಗೆಯು
ಇಂದುವವಳ ಮುಕುಟ ಮಣಿಯು ;
ತಾರೆ ರನ್ನಗಿಡಿಗಳು—ಕುರು
ಳೋಳಿ ನೀಲ ಮೇಘವು ;

೫

ತಣ್ಣನೆಲರ ಕೂಡಿಯಾಡಿ
ಮೌನದಿಂದ ಬರುವಳು—ಅನು
ರಾಗದಿಂದ ಬರುವಳು ;
ಗೂಢತರದ ಶಾಂತಿಯಿಂದ
ಜಗದೆವೆಗಳ ಮುಚ್ಚುತ—ವೈ
ಯಾರದಿಂದ ಬರುವಳು.

೬

ದಿನದ ಬೇಗೆಯಿಂದ ಬೆಂದು
ಬಲು ಬಳಲಿಹ ಭೂಮಿಗೆ—ವಿ
ಶ್ರಾಂತಿಯಿತ್ತು ಬರುವಳು ;
ನಲಿನಲಿಯುತ ಮೆಲು ನಡೆಯಲಿ
ಸಂಜೆವೆಣ್ಣು ಬರುವಳು—ನೋ
ಡದೋ ; ತೇಲಿ ಬರುವಳು ! (ಹೋಗುವಳು)

[ಜಲಗಾರನು ಪೊರಕೆ ಬುಟ್ಟಿಗಳನ್ನು ಹಿಡಿದು ಪ್ರವೇಶಿಸುವನು.]

ಜಲಗಾರ—ಎನಿತು ಸೊಗವಿಾ ಎಲರು ದುಡಿದು ಬಳಲಿದ ಮೈಗೆ?
ದುಃಖವೆಂಬುದು ಸುಖದ ಕಿಂಕರನು ; ಬಾಳೆನಿತು
ಸವಿಗನಸು ! ಸಾವಿದರೊಳರೆ ಭಯಂಕರವಲ್ಲ!

[ಒಂದು ಎತ್ತರವಾದ ಅರೆಯಮೇಲೆ ಕೂರುವನು]

ಮೂಡಿ ಬಾ ಚಂದಿರನೆ, ಬಾಳು ಸವಿಯೆಂಬುದನು
ಜಗಕೆಲ್ಲ ಸಾರುತ. ಮೂಡಿ ತಾರಕೆಗಳಿರ
ಜೀವದಾನಂದವನು ತಿರೆಗೆಲ್ಲ ತೋರುತ.
ಬೀಸು, ಬೀಸಲೆ ಮಂದಮಾರುತನೆ, ಜೀವನದ
ಬೇಗೆಯನು ತೂರುತ! ಬಾಳು ಚಿರವಲ್ಲದಿರೆ,
ಭೂಮಿ ಚಿರವಲ್ಲದಿರೆ, ಜೀವದಾನಂದವದು
ಚಿರವಲ್ಲವೇನು? ತೊಳಗುತಿಹ ಚುಕ್ಕಿಗಳೆ
ಬಾಳ ಕಿರುಗೆಲಸವಿದು, ಜಲಗಾರನೆಸಗುವೀ
ಕಿರುಗೆಲಸವಿದು ನಿಮ್ಮ ಕಾಂತಿಗಿಂತಲು ಚಿರವು.
ಒಂದು ಧರ್ಮದ ಕಿರಿಯ ಕಾರ್ಯವು ಶತಕೋಟಿ
ಸೂರ್ಯರಿಗೆ ಬೆಳಕು. ಲೋಕ ಲಕ್ಷ್ಮಕೆ ಜೀವ!
ನಮ್ಮ ಬಾಳಿದು ಬರಿಯ ಮಾಯೆಯಲ್ಲ!
ನಮ್ಮ ಕರ್ಮವು ಬರಿಯ ಕನಸಲ್ಲ!

[ರೈತನು ಜಾತ್ರೆಯಿಂದ ಹಿಂತಿರುಗಿ ಬರುವನು.]

ರೈತ— ಜಲಗಾರ,
ಏನಿನ್ನೂ ಕೆಲಸ ಪೂರೈಸಲಿಲ್ಲವೆ?

ಜಲಗಾರ—ಇಲ್ಲ, ಕರ್ಮ ಮುಗಿಯುವ ಕಾಲ ಬಂದಿಲ್ಲವಿನ್ನೂ!
ಶಿವನ ಗುಡಿಯಿಂದೇನು ತಂದಿರುವೆ ರೈತ?

ರೈತ— ಜಲಗಾರ, ಪುಣ್ಯವಿಲ್ಲವು ನಿನಗೆ! ಜಾತ್ರೆಯದು
ವೈಭವದ ಜಾತ್ರೆ! ಜನವೇನು! ಧನವೇನು!
ಆ ಗಲಭೆಯೇನು! ನೋಟಗಳೊ ಬಹುರಮ್ಯ!
ನಾನದನು ಹೇಳಿ ಮುಗಿಯಿಸಲಾರೆ.

ಜಲಗಾರ— ಇರಲಿಯದು.
ಶಿವನ ಗುಡಿಯಿಂದೇನು ತಂದಿರುವೆ?

ರೈತ — ಆಹಾ!

ಶಿವನ ಗುಡಿ ದೊಡ್ಡ ಗುಡಿ! ಏನು ಚಿತ್ರದ ಕೆಲಸ!
ವಿಗ್ರಹವು ಬಲುಚಂದ! ಜೋಯಿಸರ ಮಡಿಪಂಚೆ
ಜರತಾರಿಯಪ್ಪಾ! ಆ ಪರಿಯ ವೈಭವವ
ನಾನಂತು ನೋಡಿಲ್ಲ.

ಜಲಗಾರ — ಅದಂತಿರಲಿ ರೈತ.

ಶಿವನ ಗುಡಿಯಿಂದೇನು ತಂದಿರುವೆ? ಅದನು ಹೇಳು!

ರೈತ — ಹಳ್ಳಿಯ ಗಮಾರ! ಮೇಲೂರ ಜಲಗಾರ!
ನಿನಗೇನು ಗೊತ್ತು? ಆ ಅಂದ, ಆ ಚಂದ?
ಆರತಿಯ ನೋಡಿದೆನು. ಗಂಟೆಜಾಗಟೆಗಳನು
ಬಾರಿಸಿದೆ. ಮಂತ್ರ ಹೇಳಿದರದನು ಕೇಳಿದೆ!
ಹಣ್ಕಾಯಿ ಮಾಡಿದೆ. ಕರ್ಪೂರ ಉರಿಸಿದೆ.
ಹರಕೆಯನು ಸಲ್ಲಿಸಿದೆ. ಮತ್ತೇನು?

ಜಲಗಾರ — ಅದಂತಿರಲಿ

ಶಿವನ ಗುಡಿಯಿಂದೇನು ತಂದಿರುವೆ, ಹೇಳು.

ರೈತ — ಹಣ್ಣು ಕಾಯಿ ಹೂವು ಕರ್ಪೂರ ಕುಂಕುಮ
ಇವುಗಳನು ತಂದಿರುವೆ.

ಜಲಗಾರ — ಶಿವನ ತರಲಿಲ್ಲವೆ?

ರೈತ — ಮರುಳು ಜಲಗಾರ ನಿನ್ನೊಡನೆ ಮಾತೇಕೆ?

**[ರೈತನು ಹೋಗುವನು. ಒಬ್ಬ ಹಳ್ಳಿಯ ಹುಡುಗಿಯು ಜಾತ್ರೆಯಿಂದ ಹಿಂದಿರುಗಿ ಹಾಡುತ್ತಾ, ಬರುವಳು.]**

೧

ಹುಡುಗಿ — ಕೈಯಲ್ಲಿ ತಿರುಳಿಲ್ಲ, ಮೈಯಲ್ಲಿ ಹುರುಳಿಲ್ಲ,
ಮನೆಯಲ್ಲಿ ಕಾಳಿಲ್ಲ, ಕೂಳಿಲ್ಲ!
ಅಪ್ಪ ನೋಡಲು ಜೋಗಿ, ಅವ್ವ ನೋಡಲು ರೋಗಿ,
ನನಗಂತು ಕಣ್ಣೀರು ಬಿಡುವಿಲ್ಲ!

ಕಾಳಿಲ್ಲ, ಕೂಳಿಲ್ಲ, ಕಣ್ಣೀರು ಬಿಡುವಿಲ್ಲ,
ಕಾಯಬಾರದೆ ಬಂದು ಕಾವೆನೆಂದಿಹ ಗೊಲ್ಲ!

೨

ಇದ್ದಕ್ಕನೊಬ್ಬಳ ಸಿದ್ದಕ್ಕನೊಬ್ಬಳ
ರಕ್ಕಸ ಜವರಾಯ ಮುಕ್ಕಿದನು.
ಇದ್ದಣ್ಣನೊಬ್ಬನು ಮುದ್ದಣ್ಣನೊಬ್ಬನು
ದೇಶ ತಿರುಗಲು ಹೋಗಿ ಹಾಳಾದನು.
ನಮ್ಮ ಕಂಡರೆ ಕರುಬು ನೆರೆಯರಿಗೆಲ್ಲ,
ಕಾಯಬಾರದೆ ಬಂದು ಕಾವೆನೆಂದಿಹ ಗೊಲ್ಲ!

೩

ದನವ ಕಾಯಲೊ ನಾನು, ಕಳೆಯ ಕೀಳಲೊ ನಾನು,
ನರಳುವ ಅಪ್ಪನ ಗತಿಯೇನು?
ಹೇಳುವರಾರಿಲ್ಲ, ಕೇಳುವರಾರಿಲ್ಲ,
ದಿಕ್ಕಿಲ್ಲ, ಕೂಳಿಲ್ಲ, ಗತಿಯಿಲ್ಲ.
ಕವಿದ ಕತ್ತಲೆಯಲ್ಲಿ ಕಿರಣವೊಂದಿಲ್ಲ,
ಕಾಯಬಾರದೆ ಬಂದು ಕಾವೆನೆಂದಿಹ ಗೊಲ್ಲ!

೪

ಹರಕೆಯ ಹೊತ್ತೆ, ಕಾಣಿಕೆ ತೆತ್ತೆ,
ದೇವರಿಗೆ ಶರಣೆಂದು ಬೇಸತ್ತೆ.
ಕಂಡ ಕಂಡ ಕಲ್ಲಿಗೆ ಕೈಮುಗಿದು ಸೋತೆ,
ನನಗಿನ್ನೂ ತಪ್ಪದು ಈ ರೋತೆ.
ಅಯ್ಯೊ ಗೋವಿಂದನೆ ಬಲ್ಲೆ ನೀನೆಲ್ಲ,
ಕಾಯಬಾರದೆ ಬಂದು ಕಾವೆನೆಂದಿಹ ಗೊಲ್ಲ!

[ಹಾಡುತ್ತಾ ಹೋಗುವಳು. ಪಾರ್ವರು ಹರಟುತ್ತಾ ಬರುವರು.]

**ಮೊದಲನೆ**—ಇಂದಾದ ಲಾಭವೇ ಲಾಭ.

ಎರಡನೆ— ನಸಗಂತು
ದಕ್ಷಿಣೆಯು ಹಬ್ಬ, ಹಣ್ಣುಕಾಯಿನ ದುಡ್ಡು
ತೀರ್ಥವಾರಿದ ದುಡ್ಡು—

ಮೊದಲನೆ— ನಾನೊಬ್ಬ ಶೂದ್ರನನು
ಸುಲಿಗೆಮಾಡಿದ ದುಡ್ಡು.

ಎರಡನೆ— ಅಂತೂ ನಮಗೆಲ್ಲ ಶಿವಗುಡಿಯ ದೆಸೆಯಿಂದ
ಹಿಟ್ಟು ಹೊಟ್ಟೆಗೆ, ದುಡ್ಡು ಬಟ್ಟೆಗೆ—

ಮೊದಲನೆ—ಗುಟ್ಟುಬಿಟ್ಟರೆ ಕೆಟ್ಟೆ. ನಡೆ ಬೇಗ. (ಹೋಗುವರು)

ಜಲಗಾರ— ಜೋಯಿಸರು
ಗುಡಿಯ ನುಗ್ಗುವ ಮುನ್ನವೇ ಶಿವನ ಹೊರಗಟ್ಟಿ
ನುಗ್ಗುವರು. ಶಿವಶಿವಾ ಗುಡಿಯೊಳಿದ್ದರು ಕೂಡ
ದೇವರಿಂದತಿ ದೂರವಿಹ ಪಾಪಿಯೆಂಥವನು?

[ಕಬ್ಬಿಗನೊಬ್ಬನು ಹಾಡುತ್ತಾ ಬರುವನು]

೧

ಕಬ್ಬಿಗ— ಕೊರಗಲೇಕೆ? ಮರುಗಲೇಕೆ?
ಹುಟ್ಟಿಬಂದಿಹೆ ಹಳಿಯಲೇಕೆ?
ಸುಖವೆ ಬರಲಿ, ದುಃಖಬರಲಿ,
ರೋಗ ಭೋಗಗಳೇನೆ ಬರಲಿ,
ಎಲ್ಲ ಹೊತ್ತು ಋಣವ ತೆತ್ತು
ಮುಂದೆ ಪುಣ್ಯದ ಬೀಜ ಬಿತ್ತು.
ಕೊರಗಲೇಕೆ? ಮರುಗಲೇಕೆ?
ಹುಟ್ಟಿದಿಳೆಯನು ಹಳಿಯಲೇಕೆ?

೨

ಕೊರಗಲೇನು? ಮರುಗಲೇನು?
ಬಿಗಿದ ಬಂಧನ ಹರಿವುದೇನು?

ಸುಖವೆ ಬರಲಿ, ದುಃಖಬರಲಿ,
ಜೀವದೆಡರುಗಳೇನೆ ಇರಲಿ,
ಭಕ್ತಿಯಿಂದ ಶಕ್ತಿಯಿಂದ
ಮುಕ್ತಿಗೇರು ಧೈರ್ಯದಿಂದ.
ಕೊರಗಲೇಕೆ? ಮರುಗಲೇಕೆ?
ಬಂದ ಬಾಳನು ಹಳಿಯಲೇಕೆ?

೩

ಕೊಡುವನವನು, ಬಿಡುವನವನು,
ಎಂದು ನೀನಿರೆ ಸುಡುವನವನು.
ಗೆಲುವೆ ಬರಲಿ, ಸೋಲೆ ಬರಲಿ,
ನುಗ್ಗು ಮುಂದಕೆ ಇರುವುದಿರಲಿ.
ಅರಿಯ ಕೊಲ್ಲು, ತಿರೆಯ ಗೆಲ್ಲು;
ಇಲ್ಲ, ರಣದಲಿ ಜವಗೆ ಸಲ್ಲು.
ಕೊರಗಲೇಕೆ? ಮರುಗಲೇಕೆ?
ಬಂದುದಾಯಿತು ಹಳಿವುದೇಕೆ?

೪

ನಮ್ಮ ಬಾಳು ಸವಿಯ ಬಾಳು;
ಯಾವುದಿಲ್ಲಿ ಕಡಿಮೆ? ಹೇಳು.
ತಿಳಿಯ ಬಾನು, ಹೊಳೆವ ಮೀನು
ಸೂರ್ಯ ಚಂದ್ರರು, ಬೆಟ್ಟ, ಕಾನು,
ಹರಿವ ತುಂಗೆ, ದಿವಿಜ ಗಂಗೆ;
ಹಾಲು ಮಳೆಯಿದೆ ಬರವ ಪಿಂಗೆ.
ಕರುಣೆಯೊಲ್ಮೆ ಎಲ್ಲ ಇಲ್ಲಿ!
ಯಾವುದೆಮಗೆ ಕಡಿಮೆ ಇಲ್ಲಿ?

೫

ಕೊರಗಲೇಕೆ? ಮರುಗಲೇಕೆ?
ಬಂದ ಬದುಕನು ಬೈಯಲೇಕೆ?
ಒಲಿದು ಕೂಡಿ, ನಲಿದು ಹಾಡಿ,
ಸಮ್ಮ ಪಡೆದವನಂತೆ ಆಡಿ,
ಪರವ ನಾವು ಪಡೆವ ಮುನ್ನ
ಪಡೆಯಲೆಳಸುವ ತಿರೆಯು ಹೊನ್ನ !
ಕೊರಗಲೇಕೆ? ಮರುಗಲೇಕೆ?
ಬರಿದೆ ಬಾಳನು ಜರೆವುದೇಕೆ?

[ಕಬ್ಬಿಗನು ತೆರಳುವನು. ಒಂದು ಬಾಲಕರ ಗುಂಪು ಹಾಡುತ್ತಾ ಬರುವುದು.]

ಬಾಲಕರು—ನಾವು ಮರುಳರು, ನಾವು ಕುಡುಕರು, ಮರುಳುತನ ವೆಮ್ಮಾಟವು,
ಕಾರ್ಯವಿಲ್ಲದೆ ಬರಿದೆ ಸಂಚರಿಪಲಸಗಾರರ ಕೂಟವು.

೧

ಕಾಲಗಗನದಿ ಹಾರಿಯಾಡುವ ಹಕ್ಕಿಗಳು ನಾವ್ ಬಾಲರು.
ಹೋಗಲೆಂದೇ ಬರುವೆವು,
ಹೋಗಿ ಮರಳೈತರುವೆವು !
ನಿತ್ಯತೆಯ ಗರ್ಭದಲಿ ಜನಿಸುವ ನಾವು ಲೀಲಾ ಶೀಲರು :

೨

'ಕರ್ಮಲೀಲೆಯು, ಲೀಲೆ ಕರ್ಮವು' ಎಂಬುದೆಮ್ಮಯ ಧರ್ಮವು ;
ಪಡೆವುದೆಮಗೇನಿಲ್ಲವು,
ಕಳೆವುದೆಮಗೇನಿಲ್ಲವು,
'ಲಾಭನಷ್ಟಗಳೊಂದುಮಿಲ್ಲವು' ಎಂಬುದೇ ವರಮರ್ಮವು,

೩

ಹಾಡಿಯಾಡುತ ಕುಣಿದು ನಲಿವೆವು ಹಾಸ್ಯಮಾಡುತ ಕಾಲನ!

ಜವನ ವಿಾಸೆಯನೆಳೆವೆವು!

ಕೋರೆದಾಡೆಯ ಸೆಳೆವೆವು!

ಅಮೃತ ಪುತ್ರರು ನಾವು, ಮೃತ್ಯುವ ಲಕ್ಷ್ಯವೆಮಗಿಸಿ-ತಿಲ್ಲವು!

೪

ಮುಕ್ತಜೀವರು ನಾವು, ಬಂಧನ ಲೀಲೆಯಾಡುತಲಿರುವೆವು.

ಲೀಲೆಯೆಂಬುದೆ ಮುಕ್ತಿಯು,

ಮರುಳುತನವೇ ಶಕ್ತಿಯು;

ಹೀರಿ ಲೀಲಾಮಧುವನೆಲ್ಲರು ಮತ್ತರಾಗಿಯೆ ಬರುವೆವು.

[ಅವರೆಲ್ಲ ಹಾಡುತ್ತಾ ಹೋಗುವರು. ಜನರು ಗುಂಪುಗುಂಪಾಗಿ ಹೋಗುವರು. ಜಲಗಾರನು ಒಬ್ಬನೆ ಕುಳಿತುಕೊಳ್ಳುವನು.]

ಜಲಗಾರ—ಸದ್ದಿಲ್ಲದಿರುಳೆನಿತು ಕಣ್ಗೆಡ್ಡಮಾಗಿಹುದು!
ಒನಗಳಂ ಗಿರಿಗಳಂ ಹೊಳೆ ತೊರೆಗಳೆಲ್ಲಮುಂ
ಚುಂಬಿಸಿಹ ಜೊನ್ನೆನಿತು ಚೆಲ್ವಾಗಿದೆ!
ಬೆಳ್ದಿಂಗಳೆಂತು ಮಲಗಿಹುದಿಳೆಯೆದೆಯಮೇಲೆ!
ಗಗನ ಧೇನುವ ಕೊರಳ ಗಂಗೆದೊವಲಂದದಲಿ,
ತಿಂಗಳಿನ ಪಾಲ್ಗಡಲ ಬಲ್ದೆರೆಗಳಗ್ರದಲಿ
ತೇಲುತಿಹ ನೊರೆಯುರುಳಿಯಂದದಲಿ, ಒಲಿದವನ
ಸವಿಗನಸಿನಲಿ ಸುಳಿವ ನಲ್ಲೆಯಂಚಲದಂತೆ,
ಮೆರೆಯುತಿದೆ ತಿಳಿಯಾಳದಾಗಸದಿ ಬೆಳ್ಮುಗಿಲ ಮೊತ್ತ!
ವಿಶ್ವದ ಸುಷುಪ್ತಿಯಿದು. ಕುಳಿತಿಲ್ಲಿ ಶಿವನಂ
ಧ್ಯಾನಿಸುವೆ. ಸದ್ದಿಲ್ಲದೇಕಾಂತದಲ್ಲಿಯೇ
ಭಕ್ತಿಲತೆ ಚಿಗುರಿ ಪರಮಾತ್ಮನಡಿಯಲರುಗಳ

ಮುಟ್ಟುವುದು—ಲೋಕವರಿಯದು ಸಿದ್ಧ
ರೆನಿತಿಹರು ಜಲಗಾರರಾಗೆಂದು. (ಹಾಡುವನು)

ದಯಾ ನಿವಾಸ ನೀನು,
ದೇವದೇವ ಮೈದೋರೈ;
ಸದಾ ಪಿತಾಜಿ ನೀನು,
ಬಾಲ ನಾನು ಕಾಪಾಡೈ.
ಪುರಾಣ ಆದಿ ವೇದಯಾಗ ದಾನ
ಮತಾಚಾರಾದಿ ಚಾಗಯೋಗ ಧ್ಯಾನ
ಅಕರ್ಮ ಕರ್ಮ ಧರ್ಮ
ದಾಸದಾಸ ನಾನರಿಯೆ;
ಎನ್ನಂತರಂಗ ನೀನೆ
ಎಂಬುದೊಂದೆ ಬಲ್ಲೆನೈ!
ಗಯಾ ಪುರಿ ಕಾಶಿಯಾತ್ರೆ ಜಾತ್ರೆ
ನಾನೊಂದನೊಲ್ಲೆ; ನೀನೆ ಎಲ್ಲ ದೇವ!
ಅನಾದಿ ದೇವ ನಿನ್ನ
ಸೇವೆಯೊಂದೆ ಸಾಕೆನಗೆ!
ಎನ್ನಂತರಂಗದಲ್ಲಿ
ನಿಂತು ನೀನು ಮೈದೋರೈ!

[ಹಠಾತ್ತಾಗಿ ಶಿವನು ಜಲಗಾರನ ವೇಷವನ್ನು ಧರಿಸಿ ಮೈದೋರು
ವನು.]

ನೀನಾರು ಆಕೃತಿಯೆ! ನೀನಾರು? ಯಾರು?
ಮನುಷವಾಗಿ ಕಂಡರೂ ಅಮಾನುಷವಾಗಿ
ತೋರುತಿಹೆ! ಮಿಣುಕುತಿಹ ತಾರೆಗಳನೇಳಿಸುವ
ಕಂಗಳಿಂದೇಕೆನ್ನ ನೋಡುತಿಹೆ ಇಂತು?
ನೀನಾರು? ನೀನಾರು ಆಕೃತಿಯೆ? (ಬೆದರುವನು)

ಶಿವ— (ಗಂಭೀರವಾಗಿ) ಅಂಜದಿರು,
ಸೋದರನೆ, ಅಂಜದಿರು ; ನಾನಿನ್ನ ಬಂಧು !

ಜಲಗಾರ—(ವಿಸ್ಮಿತನಾಗಿ)
ಏನು ? ನೀನೆನ್ನ ಬಂಧು ? ನಾನರಿಯದಿಹ ಬಂಧು !

ಶಿವ— ನಾ ನಿನ್ನ ಜಾತಿ !

ಜಲಗಾರ— ನೀನೆನ್ನ ಜಾತಿ?
ಊರ ಜಲಗಾರ ನಾನು !

ಶಿವ— ನಾನೊಬ್ಬ ಜಲಗಾರ,
ಅಂಜದಿರು ಸೋದರನೆ! ಜಗದ ಜಲಗಾರ
ನಾನು ! ಶಿವನೆಂದು ಕರೆಯುವರು ಎನ್ನ !
ಚಣಚಣಕು ಜಗದ ಪಾಪವ ನುಂಗುವನು ನಾನು !
ಪೂರ್ವದಲಿ ಕಡಲ ಕಡೆಯಲು ಹುಟ್ಟಿ ಸೃಷ್ಟಿಯಂ
ಸುಡುತಿರ್ದ ಘೋರ ಹಾಲಾಹಲವ ನುಂಗಿದಾ
ನಂಜುಗೊರಲನು ನಾನು ! ಪದ್ಮನಾಭನ ನಿಲಯ,
ವೈಕುಂಠವದರಿಂದ ರಮಣೀಯವಾಗಿಹುದು !
ಮೇಣೆನ್ನ ಜಲಗಾರತನದಿಂದ, ಸೊದೆಯಿಂಟಿ
ಅಮರರಮರತೆಯ ಹೊಂದಿಹರು ; ವಿಶ್ವದಲಿ
ಸೌಂದರ್ಯ ಬಾಳುತಿದೆ. ತೊಳಗುತಿಹ ಚುಕ್ಕಿಗಳು,
ಬೆಳಗುತಿಹ ಚಂದಿರನು, ದಿನದಿನವು ತಳತಳಿಸಿ
ಬಾಂದಳದಿ ಸುತ್ತುತಿಹ ದಿನಮಣಿಯು, ಭೋರ್ಗರೆವ
ಕಡಲುಗಳು, ತಿಳಿಯಾಗಿ ಹರಿಯುತಿಹ ಹೊಳೆಗಳು,
ಮೆರೆಯುವ ಅರಣ್ಯಗಳು, ಎಲ್ಲವೂ, ಎಲ್ಲವೂ
ಜಲಗಾರನೊಬ್ಬನಿಗೆ ಋಣಿಯಾಗಿ ಬಾಳುವುವು !
ರುದ್ರನೆಂಬರು ಎನ್ನ ; ಶಿವನೆಂಬರೆನ್ನ ;
ಹೇಸುವರು, ಅಂಜುವರು, ಜಲಗಾರನೆನಲು !

ಜಲಗಾರ —(ವಿನಯದಿಂದ)

ನಿನ್ನ ನಾ ಶಿವನೆಂದು ನಂಬುವುದದೆಂತು?
ಹೇ ದೇವ, ನಿನ್ನೀ ರೂಪವಂ ನಾನೆಂದು, ಯಾವೆಡೆಯು
ಕಂಡರಿಯೆ, ಕೇಳರಿಯೆ. ತಿಳಿದವರು, ಪಂಡಿತರು
ಬೇರೊಂದು ರೀತಿಯಲಿ ಬಣ್ಣಿಸಿರುವರು ನಿನ್ನ.

ಶಿವ— ಬಿಜ್ಜಳರಾ ಕವಡು ಬಣ್ಣನೆಯ ನಂಬದಿರು
ಸೋದರನೆ. ಕುರುಡನಾದವನಿನನ ಬಣ್ಣಿಸುವ
ತೆರದಿ, ಪಂಡಿತರು ಬಣ್ಣಿಪರು ಕಲ್ಪನೆಯ
ಶಿವನ. ನನ್ನ ನಿಜರೂಪವಂ ನೋಡಲವರೆಲ್ಲ
ಹೇಸುವರು, ಬೆದರಿ ಹಿಂಜರಿಯುವರು. ಎನ್ನನೀ
ನಿಜರೂಪದಿಂದ ಕರ್ಮದಲಿ ಪೂಜಿಪನು
ನೀನೊಬ್ಬನಲ್ಲದಿನ್ನಾರ ನಾ ಕಾಣೆ!

ಜಲಗಾರ —(ಕೈಮುಗಿದು)

ರಜತಗಿರಿಗೊಡೆಯನಾಗಿಹೆಯಂತೆ; ಕೈಲಾಸ
ಪತಿಯಂತೆ; ಮಕುಟದಲಿ ಹಿಮಕರನ ತೊಟ್ಟಿರುವ
ಶಶಿಧರನು ನೀನಂತೆ. ಜಡೆಯೊಡನೆ ಗಂಗೆಯಾ-
ಗಿಹಳಂತೆ. ಕೊರಳಿನಲಿ ಹಾವುಗಳ ಕಟ್ಟಂತೆ.
ಹಣೆಯಲ್ಲಿ ಉರಿಗಣ್ಣನುಳ್ಳ ನೀಂ ಮುಕ್ಕಣ್ಣ
ನಂತೆ! ಗಿರಿಜಾರಮಣನಂತೆ! ವಿಷಕಂಠ
ನೀನಂತೆ! ನೀಂ ಕುಬೇರನ ಮಿತ್ರನಂತೆ!
ಇಂತಿಹನು ಜಗದ ಜಲಗಾರನಹನೆಂತು?
ಇಂತಿಹನೆನ್ನ ಬಾಂಧವನೆ? ಸೋದರನೆ?

ಶಿವ— (ಮುಗುಳುನಗೆಯಿಂದಲೂ ದರ್ಪದಿಂದಲೂ)
ಸೋದರನೆ, ಶಿವನು ಶಾಸ್ತ್ರಗಳ ಶಿವನಲ್ಲ!
ಕಾವ್ಯಗಳ ಶಿವನಲ್ಲ! ಕವಿತೆಯಾ ಶಿವನಲ್ಲ!

ಬೆಳ್ಳಿ ಬೆಟ್ಟದಮೇಲೆ ಗಿರಿಜೆಯೊಡಗೂಡಿ
ಸರಸವಾಡುವ ರಸಿಕ ಶಿವನಲ್ಲ! ಬ್ರಹ್ಮಾಂಡ-
ವೊತ್ತುತಿಹ ಕಸದ ರಾಸಿಯುಮೇಲೆ ಹತ್ತಿ,
ನಿಂತು, ನರ್ತನವೆಸಗುತಿಹ ತೋಟಿ ನಾನು!
ನಿಜ ಶಿವನು ಜಲಗಾರ! ನಿನ್ನ ಮುಂದಿಹನು ನೋಡು!

ಜಲಗಾರ—ಹೇ ದೇವ, ಪಂಡಿತರದೇಕಂತು ಬಣ್ಣಿಪರು?

ಶಿವ— ಸೋದರನೆ, ಶಾಸ್ತ್ರಗಳ ಕಂಗಳಿಗೆ ನಾನು
ನೋಡಲು ಕುರೂಪಿಯಾಗಿದ್ದೆ. ಅದರಿಂದ
ಚೆಲ್ವಾಂತ ತಣ್ಗದಿರನೊಡವೆ ಮಾಡಿದರೆನಗೆ!
ಅವರ ಭಾಗಕೆ ನಾನು ಪಾಪಿಯಾಗಿದ್ದೆ.
ಅದರಿಂದ ಗಂಗೆಯನು ತೊಡಿಸಿದರು ತಲೆಯಲ್ಲಿ,
ತೊಳೆದೆನ್ನ ಶುದ್ಧಮಾಡಲು ಎಂದು! ಅಸ್ಪೃಶ್ಯ
ನಾಗಿದ್ದೆ! ಅದರಿಂದ ಹಣೆಗಣ್ಣುಮುಡಿಸಿದರು,
ಸುಟ್ಟೆನ್ನ ಶುಚಿಮಾಡಲೆಂದು! ರೌದ್ರತೆಯ-
ನೀಯಲೆಂದೆನಗೆ ಉರಗಗಳ ಸುತ್ತಿದರು
ಕೊರಳಲ್ಲಿ. ಜೋಯಿಸರ ಭಾಗಕ್ಕೆ ಶಿವನು
ಮುಟ್ಟದವನಾಗಿಹನು. ಚಂದ್ರನಿಲ್ಲದೆ, ಗಂಗೆ
ಯಿಲ್ಲದೆಯೆ, ಹಣೆಗಣ್ಣು ಹಾವುಗಳು ಇಲ್ಲದೆಯೆ,
ಜನಿವಾರ ಬೂದಿಗಳು ಇಲ್ಲದೆಯೆ, ಶಿವಗುಡಿಗೆ
ಸೇರಿಸರು ಶಿವನಾದ ಎನ್ನ. ಅದರಿಂದ
ನಿಜವಾದ ಶಿವನು, ಜಲಗಾರ ಶಿವನು,
ಶಿವಗುಡಿಯ ಪೀಠದಲಿ ಎಂದೆಂದಿಗೂ ಇಲ್ಲ!

ಜಲಗಾರ—ಹೇ ದೇವ, ನೀನು ಮತ್ತೆಲ್ಲಿರುವೆ?

ಶಿವ— ಬೀದಿಗುಡಿಸುವ ಬಡವನೆದೆಯಲ್ಲಿ ನಾನಿರುವೆ!
ಉಳುತಿರುವ ಒಕ್ಕಲಿಗನೆದೆಯಲ್ಲಿ ನಾನಿರುವೆ!

ಎಲ್ಲಿ ಹೊಲೆಯನು ನನ್ನ ಕಾರ್ಯದಲ್ಲಿ ತೊಡಗಿಹನೊ
ಅಲ್ಲಿ ನಾನವನ ಪಕ್ಕದೊಳಿರುವೆ. ಕುಂಟರನು,
ಕುರುಡರನು, ದೀನರನು, ಅನಾಥರನು ಕೈಹಿಡಿದು
ಪೊರೆಯುತಿಹನೆಡೆಯಿರುವೆ. ಆ ನನ್ನ ಭಕ್ತರಿಗೆ
ನನ್ನ ನಿಜರೂಪದಿಂ ಮೈದೋರಿ ಸಲಹುವೆನು.
ನೀನೆನ್ನ ನಿಜಭಕ್ತನಾಗಿರುವೆ. ಅದಕಾಗಿ
ಕಲ್ಪನೆಯ ರೂಪವನು ತೆಗೆದೊಗೆದು ಬಂದಿಹೆನು.
ನೋಡಲ್ಲಿ! ಚಂದ್ರನಂ ಬಿಸುಡಿಹೆನು ಗಗನಕ್ಕೆ!
ಗಂಗೆಯನ್ನೆಸದಿಹೆನು ಹಿಮಗಿರಿಗೆ! ಹಾವುಗಳ
ಪಾತಾಳಕಟ್ಟಿಹೆನು! ಹಣೆಗಣ್ಣ ಹಂಚಿಹೆನು
ನೇಸರರಿಲುಗಳಿಗೆ! ಭಯಂಕರದ ಮಸಣದಲಿ
ಬಿದ್ದಿಹುದು ಜೋಯಿಸರು ಹಚ್ಚಿದಾ ಎನ್ನ
ಮೈಬೂದಿ! ಚಟ್ಟಗಳ ಕಟ್ಟುತಿದೆ ಅವರೆನಗೆ
ತೊಡಿಸಿದಾ ಯಜ್ಞೋಪವೀತ! ಅವರಿತ್ತ
ಪೊರಕೆಯಂದದ ಶೂಲ ಗುಡಿಸುತಿದೆ ಬ್ರಹ್ಮಗಳ
ಬೀದಿಯನು! ಶಾಸ್ತ್ರಗಳು ಶಿವಗಿತ್ತ ದಾನಗಳು
ತೊಲಗೆ, ಉಳಿಯುವನು ಜಗದ ಜಲಗಾರ!
ಊರ ತೋಟಿಯು ನೀನು; ಜಗದ ತೋಟಿಯು ನಾನು!
ಬಾ ಎನ್ನ ಸೋದರನೆ. ನೀನೆನ್ನ ನಿಜಭಕ್ತ!
ನಿನ್ನದೇ ಶಿವಭಕ್ತಿ! ನೀನೆ ಶಿವಭಕ್ತ!
ನೀನೆ ನಾನಾಗಿಹೆನು! ನಾನೆ ನೀನಾಗಿರುವೆ!
ಶಿವನೀನು! ಶಿವನೀನು!

ಜಲಗಾರ— (ಭಾವವಶನಾಗಿ) ಶಿವನಾನು! ಶಿವನಾನು!

[ಎಂದು ಮುಂದರಿದು ಶಿವನ ತೆಕ್ಕೆಯೊಳಗಾಗುವನು;
ಪರದೆ ಬೀಳುವುದು.]



